# PACKAGE TOURS - 2019

Hotel Room Accom. & South Indian Veg. Food

## Mini Andhra



05 Days

Feb 13

Mantralaya, Srishaila, Mahanandi, Ahobilam (Nava Narasimha)

## Kolkata Darjeeling



16 Days

Apr 10

Bhubaneshwar, Puri, Konark, Chilka Lake, Kolkata, Siliguri, Gangtok, Chengu Lake, Harbhajan Singh Mandir, Darjeeling

## Shaktipeetha Manali Special



18 Days

Apr 12
Apr 23

Wagah Border [Indo-Pak Border], Amritsar, Vaishnavi Devi, Chamunda, Kangra, Chintapurni, Jwalamukhi, Baijnath, Kullu-Manali, Vasista, Rohtang Pass [Optional], Naina Devi, Kufri, Shimla, Chandigarh, Kurukshetra, New Delhi

## North East India



14 Days

Mar 22

Guwahati, Kamakhya, Kaziranga, Shillong, Cherrapunjee, Dawki, Bomdilla, Sela Pass, Tawang, Dirung, Bhalukpong

## Nepal Special



08 Days

Apr 20
May 25

Kathmandu, Manokamana, Pokhara, Jomsom, Mukthinath, Patan

## Amarnath Yatra



19 Days

July 01

Attari Border [Indo-Pak Border], Amritsar, Katra, Vaishnavi Devi, Baltal, Amarnath, Gulmarg, Srinagar, Kurukshetra, New Delhi

## KAILASH & MANASA SAROVAR YATRA



11 Days

May 30
Jun 06, 11
July 04, 16
Aug 27 Sep 05

## Charodham Yatra



19 Days

May 06, 21
Jun 06
Sep 05, 16, 22
Oct 06, 09

Haridwar, Yamunotri, Gangotri, Uttarkashi, Kedarnath, Triyugi (Optional), Mana, Vyasa Guha, Ganesh Guha, Keshava Prayag, Badrinath, Rishikesh, New Delhi



# Shri Hansaa Travels

Recognised by Department of Tourism, Govt. of Karnataka


: 640, 40th Cross, 8th Block, Jayanagar, Bangalore - 70
: hansaatravels@gmail.com : hansaatravels.com
080-26643276 / 26543891 / 9341215612 / 9341415612



# ವಿವೇಕಪ್ರಭ

ಫೆಬ್ರವರಿ-2019

ಸಂಪುಟ 20 ಸಂಚಿಕೆ 02









## ವಿಶೇಷ ಲೇಖನ



## ಧಾರಾವಾಹಿ











ವ್ಯವಸ್ಥಾಪಕ ಸಂಪಾದಕರು: ಸ್ವಾಮಿ ಆತ್ಮಜ್ಞಾನಂದ
ಸಂಪಾದಕರು: ಸ್ವಾಮಿ ಜ್ಞಾನಯೋಗಾನಂದ

ನೆರವು: ಆರ್. ಎಸ್. ಪೂರ್ಣಾನಂದ,
ಡಾ. ಕೆ. ಎಲ್. ಪ್ರಸನ್ನಾಕ್ಷೀ,
ಡಾ. ಎಚ್. ಪಾಂಡುರಂಗ ವಿಠಲ

ಅಕ್ಷರ ಜೋಡಣೆ: ಶ್ರೀರಾಮಕೃಷ್ಣ ಆಶ್ರಮ, ಮೈಸೂರು
ಮುದ್ರಣ: ಮಯೂರ್ ಗ್ರಾಫಿಕ್ಸ್, ಬೆಂಗಳೂರು

### ಮುಖಪುಟ

ಕಾಳಿಂದೀ ಪುಲ್ಲಕಮಲೇ..

### ಚಂದಾ ವಿವರ

ಬಿಡಿ ಪ್ರತಿ : ₹ 14
ವಾರ್ಷಿಕ : ₹ 140
ಮೂರು ವರ್ಷ : ₹ 375
ಆಜೀವ (25 ವರ್ಷ) : ₹ 3,000
ಪೋಷಕರು : ₹ 5,000 ಅಥವಾ ಹೆಚ್ಚು.

ವಿದೇಶಗಳಿಗೆ : (ಏರ್‌ಮೇಲ್)
ವಾರ್ಷಿಕ : $ 20; ಮೂರು ವರ್ಷ: $ 60
ಆಜೀವ (25ವರ್ಷ): $ 300
ಪೋಷಕರು : $ 600 ಅಥವಾ ಹೆಚ್ಚು.

### ಈ ಪತ್ರಿಕೆಯ ಧ್ಯೇಯ

'ನಾವು ಪತ್ರಿಕೆಯ ಮೂಲಕ ಸಕಲ ವಿಚಾರಗಳಲ್ಲಿಯೂ ಜೀವನಪೋಷಕ ಆದರ್ಶಗಳನ್ನು ಜನರಿಗೆ ಕೊಡಬೇಕು... ವೇದವೇದಾಂತಗಳ ಉಚ್ಚ ಭಾವನೆಗಳನ್ನು ಸುಲಭವಾದ ಮಾತುಗಳಲ್ಲಿ ಜನರಿಗೆ ತಿಳಿಸಿಕೊಡಬೇಕು.'

– ಸ್ವಾಮಿ ವಿವೇಕಾನಂದ



ಚಂದಾ ಹಣವನ್ನು (Sri Ramakrishna Ashrama, Viveka Prabha A/c ಹೆಸರಿಗೆ) ಎಂ.ಓ. ಅಥವಾ ಡಿ.ಡಿ. ಮೂಲಕ ಮಾತ್ರ ಕಳುಹಿಸಬೇಕು. ಚೆಕ್‌ಗಳನ್ನು ಸ್ವೀಕರಿಸಲಾಗುವುದಿಲ್ಲ. ಆಜೀವ ಚಂದಾದಾರರು ಮತ್ತು ಪೋಷಕರಿಗೆ ಮೈಸೂರು ಆಶ್ರಮದ ಪುಸ್ತಕಗಳ ಮೇಲೆ ಮೈಸೂರು ಆಶ್ರಮದ ಮೂಲಕ ನೇರವಾಗಿ ಕೊಂಡಾಗ ಮಾತ್ರ ಶೇ. 20 ರಷ್ಟು ರಿಯಾಯಿತಿ ಕೊಡಲಾಗುವುದು. ಪೋಷಕ ಸಹಾಯಧನಕ್ಕೆ 80-G ಅಧಿನಿಯಮದ ಪ್ರಕಾರ ವರಮಾನ ತೆರಿಗೆ ವಿನಾಯಿತಿ ಇದೆ. ಪೋಷಕರ ಹೆಸರನ್ನು ಪತ್ರಿಕೆಯಲ್ಲಿ ಪ್ರಕಟಿಸಲಾಗುವುದು.



E-mail: mysuru.vivekaprabha@rkmm.org
Website: www.vivekaprabha.net
ಫೋನ್ : 9481533505

ಪ್ರಾರ್ಥನೆ

# ಶ್ರೀ ಲಕ್ಷ್ಮೀನೃಸಿಂಹ ಸ್ತೋತ್ರದಿಂದ



**ಸಂಸಾರ ಘೋರ ಗಹನೇ ಚರತೋ ಮುರಾರೇ ।**
**ಮಾರೋಗ್ರಭೀಕರಮೃಗ ಪ್ರವರಾರ್ದಿತಸ್ಯ ॥**
**ಆರ್ತಸ್ಯ ಮತ್ಸರನಿದಾಘನಿಪೀಡಿತಸ್ಯ ।**
**ಲಕ್ಷ್ಮೀನೃಸಿಂಹ ಮಮ ದೇಹಿ ಕರಾವಲಂಬಮ್ ॥ ೧ ॥**

ಮುರಾರಿ, ಶ್ರೀ ಲಕ್ಷ್ಮೀನೃಸಿಂಹ, ಸಂಸಾರ ಭೀಕರ ಗಹನ ವನದಲ್ಲಿ ಸಂಚರಿಸುವ, ಉಗ್ರ ಭಯಂಕರ ಕೇಸರಿಯಂತಿರುವ ಕಾಮನಿಂದ ಪೀಡಿತನಾದ, ಮತ್ಸರದ ಬೆಂಕಿಯಿಂದ ಪೀಡಿತನಾದ ನನಗೆ ನಿನ್ನ ಕೈಗಳ ಆಶ್ರಯವನ್ನು ಕೊಡು.

**ಸಂಸಾರಕೂಪಮತಿಘೋರಮಗಾಧಮೂಲಂ ।**
**ಸಂಪ್ರಾಪ್ಯ ದುಃಖಶತಸರ್ಪಸಮಾಕುಲಸ್ಯ ॥**
**ದೀನಸ್ಯ ದೇವ ಕೃಪಣಾಪದಮಾಗತಸ್ಯ ।**
**ಲಕ್ಷ್ಮೀನೃಸಿಂಹ ಮಮ ದೇಹಿ ಕರಾವಲಂಬಮ್ ॥ ೨ ॥**

ದೇವನೇ, ಸಂಸಾರರೂಪಿ ಅತಿ ಘೋರ ಕೂಪದ ಅತ್ಯಂತ ತಲವನ್ನು ತಲುಪಿ, ಅನೇಕ ಸರ್ಪಗಳು ಒಟ್ಟಿಗೆ ಕಚ್ಚಿದಷ್ಟು ದುಃಖದಿಂದ ಬಳಲಿ ದೀನನಾದ, ಕೃಪಣನಾದ ನನಗೆ ಶ್ರೀ ಲಕ್ಷ್ಮೀನೃಸಿಂಹನೆ, ನಿನ್ನ ಕರಗಳ ಆಶ್ರಯವನ್ನು ಕೊಡು.

**ಸಂಸಾರ ಸಾಗರ ವಿಶಾಲ ಕರಾಲಕಾಲ ।**
**ನಕ್ರಗ್ರಹಗ್ರಸನ ನಿಗ್ರಹ ವಿಗ್ರಹಸ್ಯ ॥**
**ವ್ಯಗ್ರಸ್ಯ ರಾಗರಸನೋರ್ಮಿನಿಪೀಡಿತಸ್ಯ ।**
**ಲಕ್ಷ್ಮೀನೃಸಿಂಹ ಮಮ ದೇಹಿ ಕರಾವಲಂಬಮ್ ॥ ೩ ॥**

ಸಂಸಾರ ಸಾಗರದಲ್ಲಿ ದೊಡ್ಡ ಭೀಕರ ಮೊಸಳೆಯ (ಕಾಲನ) ಹಿಡಿತದಿಂದ ಬಂಧಿತನಾದ, ವ್ಯಾಕುಲದೇಹದ, ಆಸಕ್ತಿಯೆಂಬ ತೆರೆಗಳ ಹೊಡೆತದಿಂದ ಪೀಡಿತನಾದ ನನಗೆ ಶ್ರೀ ಲಕ್ಷ್ಮೀನೃಸಿಂಹನೆ, ನಿನ್ನ ಕೈಗಳ ಆಶ್ರಯವನ್ನು ನೀಡು.

— ಶ್ರೀ ಶಂಕರಾಚಾರ್ಯ

ಸೂಕ್ತಿಪ್ರಭ

## ದಿವ್ಯ ಸೂಕ್ತಿಗಳು

**ಆ**ತ್ಮಾರ್ಪಣೆ! ಆತ್ಮಾರ್ಪಣೆ! ಆತ್ಮಾರ್ಪಣೆಗೆ ಇದೇ ದಾರಿ. ಬೇರೆ ದಾರಿಯೇ ಇಲ್ಲ. ಕಲಿಯುಗದಲ್ಲಿ ಮನುಷ್ಯನ ಪ್ರಾಣ ಅನ್ನದ ಮೇಲೆ ಇರುವುದು. ಅವನ ಆಯುಸ್ಸು ಅಲ್ಪ. ಈ ಅಲ್ಪ ಅವಕಾಶದಲ್ಲಿ ಅವನು ಎಷ್ಟೋ ಮಾಡಬೇಕಾಗಿದೆ. ಭಗವಂತನ ಸಾಕ್ಷಾತ್ಕಾರಕ್ಕೆ ಬೇಕಾಗುವ ಶಕ್ತಿ, ತ್ಯಾಗ, ಧೈರ್ಯ, ತಪಸ್ಸು ಇರುವುದು ಬಹಳ ಕಡಿಮೆ. ಅವನ ಮನಸ್ಸು ದುರ್ಬಲ. ಸ್ವಾಭಾವಿಕವಾಗಿ ಭೋಗವಸ್ತುಗಳನ್ನು ಹುಡುಕಿಕೊಂಡು ಹೋಗುವುದು. ಆದರೂ ದೇವರನ್ನು ಕಾಣಬೇಕಾಗಿದೆ. ಭಗವಂತನ ಸಾಕ್ಷಾತ್ಕಾರವಿಲ್ಲದೆ ಇದ್ದರೆ ಅವನ ಬಾಳು ವ್ಯರ್ಥ. ಯಾವ ಸಾರ್ಥಕವಾದುದನ್ನೂ ಸಾಧಿಸದೆ ಮನುಷ್ಯ ಜಗತ್ತಿಗೆ ಬರುವನು ಹೋಗುವನು. ದೇವರನ್ನು ಮಾನವ ಪಡೆಯಬೇಕು. ಆತ್ಮಾರ್ಪಣೆಗಿಂತ ಸುಲಭ ಮಾರ್ಗವಿಲ್ಲ.

— ಸ್ವಾಮಿ ಬ್ರಹ್ಮಾನಂದ

**ಎ**ಲ್ಲಿಯವರೆಗೆ ಆಸಕ್ತಿಯಿರುವುದೋ ಅಲ್ಲಿಯವರೆಗೆ ಕಲ್ಪನೆಗಳೂ ಇರುವುವು. ಕಲ್ಪನೆಗಳನ್ನು (imaginations) ನಿಲ್ಲಿಸು, ಆಗ ನೋಡುವೆ, ನಿಮ್ಮ ಕಾಮಿನೀ-ಕಾಂಚನಾಸಕ್ತಿಯೂ ಓಡಿಹೋಗುವುದು. ಆದರೆ ಕಲ್ಪನೆಗಳು ಅಷ್ಟು ಸುಲಭವಾಗಿ ನಿಲ್ಲುವವೆ? ಭಗವನ್ನಾಮದಲ್ಲಿ ಮೈಮರೆಯದಿದ್ದರೆ ಕಲ್ಪನೆಗಳು ಬಿಟ್ಟುಹೋಗುವುದಿಲ್ಲ.

— ಸ್ವಾಮಿ ಅದ್ಭುತಾನಂದ

**ಹೃ**ದಯಪೂರ್ವಕವಾಗಿ ನೀನು ದೇವರನ್ನು ಪ್ರಾರ್ಥಿಸುತ್ತಾ ಹೋಗು. ನಿನಗೆ ಗುರುವಿನ ಅಗತ್ಯವಿರುವುದೇ ಆದಲ್ಲಿ, ದೇವರು ನಿನಗೆ ಬೇಕಾಗಿರುವ ಅಂಥ ಯಾರೋ ಒಬ್ಬ ಗುರುವನ್ನು ನಿನ್ನ ಬಳಿಗೆ ಕಳುಹಿಸಿಕೊಡುವನು.

— ಸ್ವಾಮಿ ತ್ರಿಗುಣಾತೀತಾನಂದ



# SRI RAMAKRISHNA ADVAITA ASHRAMA

Ashrama Road, Kalady -683574, Dist. Ernakulam, Kerala
Email: kalady@rkmm.org Ph: 0484-2462345/2461071

## ಭಕ್ತರು ಹಾಗೂ ಹಿತೈಷಿಗಳಲ್ಲಿ ಒಂದು ವಿಜ್ಞಾಪನೆ



ಕಾಲಡಿಯು ಶಿವನ ಅವತಾರವಾದ, ಮಹಾನ್ ಆಧ್ಯಾತ್ಮಿಕ ವ್ಯಕ್ತಿಯೂ, ಅದ್ವೈತ ವೇದಾಂತದ ಸಂಸ್ಥಾಪಕರೂ ಆದ **ಆದಿ ಶಂಕರಾಚಾರ್ಯ**ರ ಜನ್ಮಸ್ಥಳವಾಗಿದೆ. ಆಶ್ರಮವು ಪೂರ್ಣಾನದಿಯ ದಡದಲ್ಲಿದೆ. 1936ರಲ್ಲಿ ಆರಂಭವಾದ ಈ ಆಶ್ರಮವು 1941ರಲ್ಲಿ ಬೇಲೂರು ಮಠದ ರಾಮಕೃಷ್ಣ ಮಠಕ್ಕೆ ಸೇರ್ಪಡೆಗೊಂಡಿತು. ಸ್ವಾಮಿ ಬ್ರಹ್ಮಾನಂದರ ಶಿಷ್ಯರಾಗಿದ್ದ ಸ್ವಾಮಿ ಆಗಮಾನಂದರು ಈ ಆಶ್ರಮದ ಸ್ಥಾಪಕ ಅಧ್ಯಕ್ಷರಾಗಿದ್ದರು. ಆಶ್ರಮವು ಆರಂಭವಾದ ನಂತರ ಅದು ಕೇರಳದಲ್ಲಿ ಆಧ್ಯಾತ್ಮಿಕತೆ, ಸಾಮಾಜಿಕ ಅಭಿವೃದ್ಧಿ ಹಾಗೂ ಸೇವಾಕಾರ್ಯಗಳ ಒಂದು ಮುಖ್ಯ ಕಾರ್ಯಕ್ಷೇತ್ರವೆನಿಸಿದೆ. ಕಳೆದ 77 ವರ್ಷಗಳಿಂದ ನಾವು ಸಮಾಜ ಕಲ್ಯಾಣ ಹಾಗೂ ಶೈಕ್ಷಣಿಕ ಕ್ಷೇತ್ರಗಳಲ್ಲಿ ಅಮೂಲ್ಯ ಸೇವೆಯನ್ನು ಅನವರತ ಸಲ್ಲಿಸುತ್ತಿದ್ದೇವೆ.

ಆಶ್ರಮವು ವಿವಿಧ ಶೈಕ್ಷಣಿಕ ಸಂಸ್ಥೆಗಳ, ವಿದ್ಯಾರ್ಥಿನಿಲಯ, ಸಮಾಜ ಕಲ್ಯಾಣ ಕೇಂದ್ರ, ಕಂಪ್ಯೂಟರ್ ಹಾಗೂ ಬೆರಳಚ್ಚು ತರಬೇತಿ ಕೇಂದ್ರಗಳ ಮೂಲಕ ವೈವಿಧ್ಯಮಯವಾದ ಸಮಾಜಸೇವಾ ಕಾರ್ಯಗಳನ್ನು ನಡೆಸುತ್ತಿದೆ. ಈ ಆಶ್ರಮದ ಆವರಣದಲ್ಲಿ ವಿಶ್ವಭ್ರಾತೃತ್ವ ಮಂದಿರ, ಸಭಾಂಗಣಗಳು ಹಾಗೂ ಶಾಲೆಗಳಿವೆ. (ಶಾಲೆಯಲ್ಲಿ ಕಿಂಡರ್‌ಗಾರ್ಟನ್ ನಿಂದ +2 ವರೆಗಿನ ವಿದ್ಯಾರ್ಥಿಗಳು ಓದುತ್ತಿದ್ದಾರೆ. ಅವರಿಗೆ ಶಾಲಾವಾಹನ, ಕ್ರೀಡಾಂಗಣ, ಗ್ರಂಥಾಲಯ ಮೊದಲಾದ ಸೌಲಭ್ಯಗಳನ್ನು ಒದಗಿಸಲಾಗುತ್ತಿದೆ.) 1966ರಿಂದ ಆಶ್ರಮವು ಬಡಕಟ್ಟು ವಿದ್ಯಾರ್ಥಿನಿಲಯವನ್ನು ನಡೆಸುತ್ತಿದೆ. ಪರಿಶಿಷ್ಟ ಜಾತಿಯ ವಿದ್ಯಾರ್ಥಿಗಳಿಗಾಗಿ ಒಂದು ಕಂಪ್ಯೂಟರ್ ಹಾಗೂ ಬೆರಳಚ್ಚು ತರಬೇತಿ ಕೇಂದ್ರವನ್ನೂ ಆಶ್ರಮ ನಡೆಸುತ್ತಿದ್ದು, ಅದು ಅವರಿಗೆ ಸರ್ಕಾರಿ ಹಾಗೂ ಖಾಸಗಿ ಕಂಪೆನಿಗಳಲ್ಲಿ ಉದ್ಯೋಗ ಪಡೆಯಲು ನೆರವಾಗುತ್ತಿದೆ. ಮುವಾಟ್ಟುಪುಳ ಎಂಬಲ್ಲಿ ಈ ಆಶ್ರಮದ ಉಪಕೇಂದ್ರವೂ ಕಾರ್ಯ ನಿರ್ವಹಿಸುತ್ತಿದೆ.

ಈ ಮೇಲಿನ ಚಟುವಟಿಕೆಗಳನ್ನು ನಡೆಸಿಕೊಂಡು ಬರಲು ಆಶ್ರಮವು ಪ್ರಧಾನವಾಗಿ ನಿಮ್ಮಂತಹ ಭಕ್ತರ ಹಾಗೂ ಹಿತೈಷಿಗಳ ಆರ್ಥಿಕ ನೆರವನ್ನೇ ಆಶ್ರಯಿಸಬೇಕಾಗಿದೆ. ಹಲವು ಬಾರಿ ದಾನ-ದತ್ತಿಗಳ ಕೊರತೆ, ಹಣದುಬ್ಬರ ಮುಂತಾದ ಕಾರಣಗಳಿಂದ ಆರ್ಥಿಕ ಕೊರತೆಯ ಪರಿಸ್ಥಿತಿಯುಂಟಾಗಿದೆ. ಈ ಕಾರಣಗಳಿಂದ ತಾವು ನಮ್ಮ ಉದಾತ್ತ ಸೇವಾಕಾರ್ಯಗಳಿಗೆ ನೆರವಾಗುವಂತೆ, ಉದಾರವಾಗಿ ಧನಸಹಾಯ ಮಾಡಲು ಹಾಗೂ ತಮ್ಮ ಬಂಧು-ಮಿತ್ರರಿಗೂ ಈ ದಿಕ್ಕಿನಲ್ಲಿ ಪ್ರೇರಣೆ ನೀಡಲು ತಮ್ಮನ್ನು ಕಳಕಳಿಯಿಂದ ವಿನಂತಿಸಿಕೊಳ್ಳುತ್ತಿದ್ದೇವೆ.

| ಕ್ರ . ಸಂ. | ಚಟುವಟಿಕೆ | ವಾರ್ಷಿಕ ವೆಚ್ಚವನ್ನು ಪೂರೈಕೆ ಮಾಡಲು ತಗಲುವ ಕನಿಷ್ಠ ಧನಸಹಾಯ |
|---|---|---|
| 1. | **ನಿತ್ಯ ಸೇವಾಕಾರ್ಯಗಳು** – ಶ್ರೀರಾಮಕೃಷ್ಣರ ಪೂಜೆ, ಜಯಂತಿ ಉತ್ಸವಗಳು, ಆಶ್ರಮ ನಿವಾಸ-ನಿರ್ವಹಣೆ, ನಿತ್ಯ ಅನ್ನದಾನ ಹಾಗೂ ಸಾಧುಸೇವೆ. | 25 ಲಕ್ಷ ರೂ. |
| 2. | **ಶೈಕ್ಷಣಿಕ** – ಶಾಲಾ ಚಟುವಟಿಕೆಗಳ ನಿರ್ವಹಣೆ, ಕಟ್ಟಡಗಳ ನಿರ್ವಹಣೆ, ಶಾಲಾ ಚಟುವಟಿಕೆಗಳ ಆಧುನೀಕರಣ ಹಾಗೂ ಉನ್ನತೀಕರಣ, ಬಡ ವಿದ್ಯಾರ್ಥಿಗಳಿಗೆ ನೆರವು ನೀಡುವ ನಿಧಿ, ಸ್ಕಾಲರ್‌ಶಿಪ್ ಇತ್ಯಾದಿ. | 10 ಲಕ್ಷ ರೂ. |
| 3. | **ಸಮಾಜ ಅಭಿವೃದ್ಧಿ ಹಾಗೂ ಕಲ್ಯಾಣ ಸೇವಾಕಾರ್ಯಗಳು** – ಶ್ರೀರಾಮಕೃಷ್ಣ ಗುರುಕುಲಂ ವಿದ್ಯಾರ್ಥಿನಿಲಯದ ಖರ್ಚುವೆಚ್ಚಗಳು, ಪರಿಶಿಷ್ಟ ವರ್ಗ ಕಲ್ಯಾಣ, ಪರಿಶಿಷ್ಟ ಜಾತಿ ತರಬೇತಿ ಕೇಂದ್ರ, ಕಂಪ್ಯೂಟರ್ ಹಾಗೂ ಬೆರಳಚ್ಚು ತರಬೇತಿ ಕೇಂದ್ರ, ಬಡವರಿಗೆ ಹಾಗೂ ವಿಧವೆಯರಿಗೆ ಆರ್ಥಿಕ ನೆರವು ಇತ್ಯಾದಿ. | 15 ಲಕ್ಷ ರೂ. |
| 4. | **ಹೊಸ ಜನರೇಟರ್ ಖರೀದಿ** – ಮಂದಿರ, ಆಫೀಸು, ಗುರುಕುಲ ವಿದ್ಯಾರ್ಥಿನಿಲಯ, ಸಾಧು ನಿವಾಸ ಹಾಗೂ ಅತಿಥಿ ಗೃಹ ಇವುಗಳಿಗೆ ಹೆಚ್ಚುವರಿ ವಿದ್ಯುತ್ ಪೂರೈಕೆಗಾಗಿ. | 6 ಲಕ್ಷ ರೂ. |

ತಮ್ಮ ದೇಣಿಗೆಯನ್ನು ನೀವು ಚೆಕ್/ಡಿ.ಡಿ.("Sri Ramakrishna Advaita Ashrama" ಹೆಸರಿನಲ್ಲಿ), ಇಲೆಕ್ಟ್ರಾನಿಕ್ ವರ್ಗಾವಣೆ ಮೂಲಕ ಕಳುಹಿಸಬಹುದು. (Canara Bank, Kalady IFSC Code CNRB0002921 Account Number 2921101005444.) ದೇಣಿಗೆಯನ್ನು ಕಳುಹಿಸಿದ ಬಳಿಕ ತಮ್ಮ ಹೆಸರು, ಪೂರ್ಣ ವಿಳಾಸ, ಪ್ಯಾನ್ ನಂಬರ್ ಇವನ್ನು kalady@rkmm.org ಈ ವಿಳಾಸಕ್ಕೆ ಇ-ಮೇಲ್ ಮೂಲಕ ಕಳುಹಿಸಿಕೊಡಬೇಕು. ನೀವು ನೀಡುವ ದೇಣಿಗೆಯು ಆದಾಯ ತೆರಿಗೆ ಕಾಯಿದೆಯ u/s 80G ತೆರಿಗೆ ವಿನಾಯಿತಿ ಪಡೆಯಲು ಅರ್ಹ ವಾಗಿರುತ್ತದೆ. ರೂ.25,000/- ಕ್ಕೂ ಹೆಚ್ಚಿನ ಮೊತ್ತವನ್ನು ದತ್ತಿಯನ್ನಾಗಿ ಪರಿಗಣಿಸಿ ಸ್ವೀಕರಿಸಲಾಗುವುದು.

ಭಗವಾನ್ ಶ್ರೀರಾಮಕೃಷ್ಣರು ನಿಮ್ಮ ಎಲ್ಲ ಕಾರ್ಯಚಟುವಟಿಕೆಗಳಲ್ಲಿ ತಮ್ಮ ಕೃಪೆಯನ್ನು ಹರಿಸಲಿ ಎಂಬುದೇ ನಮ್ಮ ಹೃತ್ಪೂರ್ವಕ ಪ್ರಾರ್ಥನೆ.

ಭಗವತ್ಸೇವೆಯಲ್ಲಿ ತಮ್ಮ,
ಸ್ವಾಮಿ ಶ್ರೀವಿದ್ಯಾನಂದ
ಅಧ್ಯಕ್ಷರು

# ಶ್ರೀ ರಾಮಕೃಷ್ಣ ವಿವೇಕಾನಂದ ಆಶ್ರಮ, ಕೊಪ್ಪಳ (ರಿ)

**ಗದಗ ರೋಡ್, ಗೌರಿಶಂಕರ ದೇವಸ್ಥಾನ ಹತ್ತಿರ, ಕೊಪ್ಪಳ-583231 ತಾ/ಜಿ: ಕೊಪ್ಪಳ**

Email ID : rvakoppal@gmail.com Mob. No : 8050169885



## ನೂತನ ಮಂದಿರ ಮತ್ತು ಆಶ್ರಮ ನಿರ್ಮಾಣ - ಒಂದು ಮನವಿ

ಪ್ರೀತಿಯ ಭಕ್ತರೇ, ಹಿತೈಷಿಗಳೇ ಮತ್ತು ಸ್ನೇಹಿತರೇ, ನಿಮಗೆ ಭಗವಂತನ ದಿವ್ಯ ಸ್ಮರಣೆಗಳು.

ಆತ್ಮೀಯ ನಮಸ್ಕಾರಗಳು. ಶ್ರೀರಾಮಕೃಷ್ಣ ಪರಮಹಂಸರು ಹಾಗೂ ಸ್ವಾಮಿ ವಿವೇಕಾನಂದರು ಜಗತ್ತಿನ ಜನರಿಗೆ ಸರ್ವಧರ್ಮ ಸಮನ್ವಯ ತತ್ತ್ವವನ್ನು, ಭಾವೈಕ್ಯತೆಯ ಅನಿವಾರ್ಯತೆಯನ್ನು ಮತ್ತು ಹಿಂದೂಧರ್ಮದ ಶ್ರೇಷ್ಠತೆಯನ್ನು ಮನಗಾಣಿಸಿದ ಮಹಾನುಭಾವರು. ಅವರ ಇಂತಹ ಉನ್ನತ ಮತ್ತು ಉದಾತ್ತ ಆದರ್ಶಗಳನ್ನು ಆಧರಿಸಿ ಕೊಪ್ಪಳದಲ್ಲಿ ೯ ವರ್ಷಗಳಿಂದ **ಶ್ರೀರಾಮಕೃಷ್ಣ ವಿವೇಕಾನಂದ ಆಶ್ರಮವು** ಪ್ರಾರಂಭವಾಯಿತು. ಸಮಾಜದ ಮುಖ್ಯ ಸ್ತಂಭಗಳಾದ ವಿದ್ಯಾರ್ಥಿಗಳಿಗೆ, ಶಿಕ್ಷಕರಿಗೆ ಹಾಗೂ ಪೋಷಕರಿಗೆ ಶಾಲಾ ಕಾಲೇಜುಗಳಲ್ಲಿ ವ್ಯಕ್ತಿತ್ವ ವಿಕಸನ ಶಿಬಿರ, ಯುವಕರಿಗೆ ದುಶ್ಚಟಗಳನ್ನು ಬಿಡುವ ಕುರಿತು ಜಾಗೃತಿ ಶಿಬಿರ, ಮಕ್ಕಳಿಗಾಗಿ ಬೇಸಿಗೆ ತರಬೇತಿ ಶಿಬಿರ, ಅಧ್ಯಾತ್ಮಿಕ ಕಾರ್ಯಕ್ರಮಗಳನ್ನು; ಆರೋಗ್ಯ ಸದೃಢತೆಗೆ ಯೋಗಾಸನ, ಪ್ರಾಣಾಯಮ ಶಿಬಿರಗಳೇ ಮುಂತಾದ ಸಮಾಜಮುಖೀ ಕೆಲಸಗಳನ್ನು ಆಶ್ರಮವು ಇಲ್ಲಿಯತನಕ ನಿರಂತರ ಮಾಡುತ್ತಾ ಬಂದಿದೆ. ಅಲ್ಲದೆ, ಶ್ರೀರಾಮಕೃಷ್ಣರ, ಶ್ರೀಶಾರದಾಮಾತೆ ಹಾಗೂ ಸ್ವಾಮಿ ವಿವೇಕಾನಂದರ ಸಾಹಿತ್ಯ ಪ್ರಸಾರ, ಜೀವಂತ ದುರ್ಗಾಪೂಜೆ, ಶಾಲಾ ಕಾಲೇಜುಗಳಲ್ಲಿ ಚಿಂತನೆಗಳು, ವ್ಯಕ್ತಿತ್ವ ವಿಕಸನಕ್ಕೆ ಸಂಬಂಧಪಟ್ಟ ಪುಸ್ತಕಗಳ ಉಚಿತ ವಿತರಣೆಯನ್ನು ಮಾಡುತ್ತ ಬಂದಿದ್ದೇವೆ. ಆಶ್ರಮವು ಈ ಎಲ್ಲಾ ಕಾರ್ಯಕ್ರಮಗಳನ್ನು ಬಾಡಿಗೆ ಕಟ್ಟಡದಲ್ಲಿ ಇದ್ದುಕೊಂಡೇ ಕಾರ್ಯನಿರ್ವಹಿಸುತ್ತಾ ಬಂದಿದೆ. ಆಶ್ರಮದ ಕಾರ್ಯಚಟುವಟಿಕೆಗಳನ್ನು ಗುರುತಿಸಿ ಕರ್ನಾಟಕ ಸರಕಾರವು ಕೊಪ್ಪಳ ನಗರದ ಚುಕ್ಕನಕಲ್ ಗೊಂಡಬಾಳ ರಸ್ತೆಯ ಪಕ್ಕದಲ್ಲಿ ೨ ಎಕರೆ ಭೂಮಿಯನ್ನು ಮಂಜೂರು ಮಾಡಿದೆ. ಈ ಸ್ಥಳದಲ್ಲಿ ಆಶ್ರಮ ಕಟ್ಟಡ ನಿರ್ಮಾಣ ಕಾರ್ಯ ಈಗ ಪ್ರಾರಂಭವಾಗಿದೆ. ಆರ್ಥಿಕವಾಗಿ ಹಿಂದುಳಿದ ಮಕ್ಕಳಿಗೆ ಮತ್ತು ಶಿಕ್ಷಕರಿಗೆ ವಸತಿ ನಿಲಯ ಹಾಗೂ ಕಾರ್ಯಗಾರ ನಡೆಸುವ ಸಲುವಾಗಿ ಸಾಂಸ್ಕೃತಿಕ ಭವನ ನಿರ್ಮಾಣ ಮಾಡಿ ಕೊಪ್ಪಳ ಜಿಲ್ಲಾದ್ಯಾಂತ ಕಲೆ, ಸಾಹಿತ್ಯ, ಸಂಗೀತ ಕಾರ್ಯಕ್ರಮಗಳನ್ನು ಪ್ರೋತ್ಸಾಹಿಸಿ, ಇಲ್ಲಿನ ಜನರನ್ನು ಸೃಜನಾತ್ಮಕ ಕಾರ್ಯಗಳಲ್ಲಿ ತೊಡಗಿಸಬೇಕೆಂಬುದು ನಮ್ಮ ಉದ್ದೇಶವಾಗಿದೆ. ಆಶ್ರಮದ ಈ ಎಲ್ಲಾ ಕಟ್ಟಡಗಳ ಯೋಜನೆಗಳಿಗಾಗಿ ಒಟ್ಟು ೩ ಕೋಟಿ ರೂಪಾಯಿಗಳ ಆವಶ್ಯಕತೆ ಇದೆ.

ಉದಾರ ಹೃದಯದವರಾದ ಎಲ್ಲ ದಾನಿಗಳು, ಆದರಲ್ಲೂ ಶ್ರೀರಾಮಕೃಷ್ಣರ ಭಕ್ತರು ಮುಂದೆ ಬಂದು ಶ್ರೀರಾಮಕೃಷ್ಣರಿಗೆ ಮೀಸಲಾದ ಈ ಆಶ್ರಮವನ್ನು ಕಟ್ಟಲು ಮತ್ತು ಆ ಮೂಲಕ ಮಾನವಜನಾಂಗದ ಸೇವೆಯನ್ನು ಸಲ್ಲಿಸಲು ದೇಣಿಗೆಗಳನ್ನು ನೀಡಬೇಕೆಂದು ಮನವಿ ಮಾಡುತ್ತೇವೆ. ಈ ಕಾರ್ಯದಲ್ಲಿ ತಮ್ಮ ಬಂಧುಗಳು ಮತ್ತು ಸ್ನೇಹಿತರನ್ನೂ ಜೊತೆಗೂಡಿಸಿಕೊಳ್ಳಬೇಕೆಂದು ನಮ್ಮ ಪ್ರಾರ್ಥನೆ. ಈ ಸೇವಾಯಜ್ಞದಲ್ಲಿ ಪಾಲ್ಗೊಳ್ಳುವ ಪ್ರತಿಯೊಬ್ಬರೂ ಭಗವಾನ್ ಶ್ರೀರಾಮಕೃಷ್ಣ, ಶ್ರೀಮಾತೆ ಶಾರದಾದೇವಿ ಮತ್ತು ಸ್ವಾಮಿ ವಿವೇಕಾನಂದರ ಆಶೀರ್ವಾದಗಳಿಗೆ ಖಂಡಿತವಾಗಿಯೂ ಪಾತ್ರರಾಗುತ್ತರೆ.

**ಆಯೋಜಿತ ಕಟ್ಟಡಗಳು:** ಭಗವಾನ್ ಶ್ರೀರಾಮಕೃಷ್ಣರ ಧ್ಯಾನ ಮಂದಿರ, ವಿವೇಕಾನಂದ ವಿದ್ಯಾರ್ಥಿ ನಿಲಯ, ವಿವೇಕಾನಂದ ನೈತಿಕ ಹಾಗೂ ಆಧ್ಯಾತ್ಮಿಕ ಶಿಕ್ಷಣ ಸಂಸ್ಥೆ, ಪುಸ್ತಕ ಮಳಿಗೆ ಮತ್ತು ಸಾರ್ವಜನಿಕ ಗ್ರಂಥಾಲಯ, ಯೋಗಾಸನ ಮತ್ತು ಕಂಪ್ಯೂಟರ್ ತರಬೇತಿ ಕೇಂದ್ರ, ಅನ್ನಪೂರ್ಣ ಪ್ರಸಾದ ನಿಲಯ, ಸಾಧುನಿವಾಸ, ಆಡಳಿತ ಕಛೇರಿ, ಶ್ರೀ ಶಾರದಾದೇವಿ ಸಾಂಸ್ಕೃತಿಕ ಸಭಾಭವನ, ಶ್ರೀರಾಮಕೃಷ್ಣ ವಿವೇಕಾನಂದ ಜೀವನ ಸಂದೇಶಗಳ ವಸ್ತು ಪ್ರದರ್ಶನ ಕೇಂದ್ರ, ಮುಖ್ಯದ್ವಾರ ಹಾಗೂ ಕಂಪೌಂಡ್.

*ಡಿ.ಡಿ., ಚೆಕ್‌ಗಳನ್ನು **'ಅಧ್ಯಕ್ಷರು, ಶ್ರೀರಾಮಕೃಷ್ಣ ವಿವೇಕಾನಂದ ಆಶ್ರಮ, ಕೊಪ್ಪಳ'** ಈ ಹೆಸರಿಗೆ ತೆಗೆದು ಕಳುಹಿಸಬೇಕು. ನೆಫ್ಟ್ ಮೂಲಕವೂ ಹಣ ಕಳುಹಿಸಬಹುದಾಗಿದೆ.*

**ಬ್ಯಾಂಕ್ ಖಾತೆ ವಿವರ**

ಶ್ರೀರಾಮಕೃಷ್ಣ ವಿವೇಕಾನಂದ ಆಶ್ರಮ(ರಿ), ಕೆನರಾ ಬ್ಯಾಂಕ್,ಕೊಪ್ಪಳ
ಖಾತೆ ಸಂಖ್ಯೆ: **0546101028832** IFSC : **CNRB0000546**

ಭಗವತ್ಸೇವೆಯಲ್ಲಿ ತಮ್ಮವ
**ಸ್ವಾಮಿ ಚೈತನ್ಯಾನಂದ**
ಅಧ್ಯಕ್ಷರು

# ತತ್ತ್ವ ಮತ್ತು ಸಾಧನೆ

ಆಧ್ಯಾತ್ಮಿಕ ಜೀವನದಲ್ಲಿ ತತ್ತ್ವ, ವಿಚಾರ ಅಗತ್ಯವೆ? ಅಗತ್ಯವಿದ್ದರೆ ಎಷ್ಟು ಅಗತ್ಯ? ತತ್ತ್ವಜ್ಞಾನವಿಲ್ಲದವರಿಗೆ ಆಧ್ಯಾತ್ಮಿಕತೆ ಲಭಿಸದೆ? — ಹೀಗೆ ಹಲವು ಬಗೆಯ ಪ್ರಶ್ನೆಗಳು ಏಳುತ್ತವೆ. ಈ ಕುರಿತು ಚರ್ಚೆ, ವಾದವಿವಾದಗಳೂ ನಡೆದಿವೆ. ಭಗವಂತನ ಸಾಕ್ಷಾತ್ಕಾರಕ್ಕೆ ತತ್ತ್ವ, ವೇದ-ವೇದಾಂತಗಳನ್ನೆಲ್ಲ ಅಧ್ಯಯನ ಮಾಡುವ ಅಗತ್ಯವೇನೂ ಇಲ್ಲ; ಭಕ್ತಿ ವೈರಾಗ್ಯ ಪರಿಶುದ್ಧತೆಗಳೇ ಅತ್ಯಂತ ಮುಖ್ಯ; ಹಲವು ಬಾರಿ ತತ್ತ್ವಜ್ಞಾನವೆಂಬುದು ಸಾಧನೆಯ ಮಾರ್ಗದಲ್ಲಿ ಅಡ್ಡಿಯಾಗುತ್ತದೆ — ಎಂದು ಹಲವು ಮಂದಿ ಮಹಾತ್ಮರು (ಮುಖ್ಯವಾಗಿ ಭಕ್ತಿಪಂಥಕ್ಕೆ ಸೇರಿದವರು) ಅಭಿಪ್ರಾಯ ಪಟ್ಟಿದ್ದಿದೆ. ಆದರೆ, ಸಾಧನೆಯ ಚರಮಸೀಮೆಯೆಂದೇ ಕರೆಯಲ್ಪಟ್ಟ ಅದ್ವೈತ ದರ್ಶನದಲ್ಲಿ ವಿಚಾರಮಾರ್ಗವೂ ಸಾಕ್ಷಾತ್ಕಾರಕ್ಕೆ ಒಂದು ಖಚಿತವಾದ ಮಾರ್ಗ ಎಂದು ಸ್ವೀಕರಿಸಿದ್ದಾರೆ. ಬೌದ್ಧಧರ್ಮ ಕೂಡ ಪ್ರಧಾನವಾಗಿ ವಿಚಾರಮಾರ್ಗಕ್ಕೆ ಪ್ರಾಮುಖ್ಯತೆ ನೀಡುತ್ತದೆ. ಈ ಎರಡು ವಿಭಿನ್ನ ಅಭಿಪ್ರಾಯಗಳ ನಡುವೆ ಸಮನ್ವಯ ಕಾಣುವುದು ಹೇಗೆ? ಯಾವುದನ್ನು ಸ್ವೀಕರಿಸಬೇಕು? ಸಾಧಕನು ಯಾವ ರೀತಿ ಮುನ್ನಡೆಯಬೇಕು? — ಈ ವಿಷಯವಾಗಿ ಇಲ್ಲಿ ಈಗ ಚಿಂತಿಸೋಣ.

### ಭಕ್ತಿ-ಜ್ಞಾನಗಳೆಂಬ ಭಿನ್ನತೆ

ಮೇಲಿನ ಎರಡು ಅಭಿಪ್ರಾಯಗಳಿಗೆ ಕಾರಣ, ಭಕ್ತಿ-ಜ್ಞಾನ ಈ ಎರಡು ಮಾರ್ಗಗಳ ಸ್ವರೂಪದಲ್ಲಿಯೇ ಇರುವ ಭಿನ್ನತೆಯೆಂಬುದು ಮೇಲ್ನೋಟಕ್ಕೆ ಸ್ಪಷ್ಟವಾಗುತ್ತದೆ. ಭಕ್ತಿಯು ಭಾವಪ್ರಧಾನ. ನಮ್ಮ ಅಂತರಂಗದಲ್ಲಿರುವ ಸಹಜವಾದ ಭಾವಗಳನ್ನು ಪರಮಾತ್ಮನ ಕಡೆಗೆ ಹರಿಸುವುದು; ವ್ಯಕ್ತಿ, ವಸ್ತುಗಳ ಮೇಲಿನ ಪ್ರೀತಿಯನ್ನು ಉನ್ನತ ಸ್ತರಕ್ಕೇರಿಸುವುದು. ಈ ಮೂಲಕ ನಶ್ವರವಾದ ಈ ಪ್ರಪಂಚದ, ಈ ಜೀವನದ ಹಾಗೂ ಇಲ್ಲಿನ ವ್ಯಕ್ತಿ-ವಸ್ತುಗಳ ಮೇಲಿನ ಮೋಹ ಅಳಿಸಿಹೋಗಿ, ಅದು ಭಗವದ್ವ್ಯಾಕುಲತೆಯಾಗಿ ಪರಿವರ್ತನೆ ಹೊಂದುವುದು. ಶಾಶ್ವತ ಸತ್ಯವಾದ, ಎಲ್ಲರ ಅಂತರಂಗದಲ್ಲಿರುವ ಭಗವಂತನೇ ನನ್ನ ಸರ್ವಸ್ವ ಎಂಬ ಭಾವ ಪ್ರಬಲವಾಗುವುದು. ಆ ಭಗವಂತನನ್ನು ವ್ಯಕ್ತಿಯಾಗಿ, ಎಲ್ಲ ಗುಣ, ಸೌಂದರ್ಯ ಹಾಗೂ ಒಳಿತುಗಳ ಮೂಲವಾಗಿ ಆರಾಧಿಸತೊಡಗುತ್ತಾನೆ, ಸಾಧಕ. ಅವನು ಭಗವಂತನನ್ನು ಪ್ರೀತಿಸುತ್ತಾನೆ, ಈ ಪ್ರೀತಿ ಕ್ರಮೇಣ ಹೆಚ್ಚುತ್ತ ಹೋಗುತ್ತದೆ. ಹೀಗೆ ಭಕ್ತನು ಭಗವಂತನೆಡೆಗೆ ಸಾಗುತ್ತಾನೆ. ಈ ಹಂತದಲ್ಲಿ ಅವನಿಗೆ ಭಗವಂತನು ಸರ್ವಶಕ್ತನೂ, ಸರ್ವಜ್ಞನೂ, ಕರುಣಾಮಯನೂ ಆಗಿ ಕಂಡುಬರುತ್ತಾನೆ. ಅವನನ್ನು ಅರಿಯುವ ಬಯಕೆಯಿಲ್ಲ; ಆದರೆ ಅವನ ಕೃಪೆಗೆ ಪಾತ್ರನಾಗುವ ಹಂಬಲವಿದೆ. ಆದ್ದರಿಂದಲೇ ಅವನು ಭಗವಂತನನ್ನು ಕುರಿತ ತತ್ತ್ವ ಸಿದ್ಧಾಂತಗಳನ್ನು ಸ್ವೀಕರಿಸಲಾರ. ಅದು ಅವನ ಭಕ್ತಿ, ಭಾವ, ಪ್ರೇಮಗಳನ್ನು ಜಡವಾಗಿಸುವುದು ಎಂದೇ ಅವನು ಭಾವಿಸುತ್ತಾನೆ.

ಜ್ಞಾನಮಾರ್ಗದ ಸ್ವರೂಪ ಇದಕ್ಕಿಂತ ಭಿನ್ನವಾಗಿದೆ. ಭಗವಂತನೊಬ್ಬನೇ ಸತ್ಯವೆಂಬುದನ್ನು ಅವನು ಖಚಿತವಾಗಿ ಅರಿತುಕೊಳ್ಳಬೇಕಾಗಿದೆ. ಒಂದು ವಸ್ತು ಸತ್ಯವೆಂದು ಸ್ಪಷ್ಟವಾಗಿ ಅರಿತಾಗ ಮಾತ್ರವೇ ಅದನ್ನು ನಾವು ಸ್ವೀಕರಿಸುತ್ತೇವೆ. ಆದ್ದರಿಂದ ಭಗವಂತನ ಅಸ್ತಿತ್ವವನ್ನು ಎಲ್ಲ ತರ್ಕ, ಸಿದ್ಧಾಂತ, ತತ್ತ್ವಗಳ ಮೂಲಕ ಅರಿತುಕೊಳ್ಳಲು ಯತ್ನಿಸಬೇಕು. ಶಾಸ್ತ್ರಗಳು ಮತ್ತು ಗುರು — ಇವರ ಮೂಲಕ ಮಾತ್ರವೇ ತತ್ತ್ವವನ್ನು ಅರಿಯಬಹುದು. ಹೀಗೆ ಕಲಿತು, ಅರಿತುಕೊಂಡ ತತ್ತ್ವವು ಸಾಧಕನ ಹೃದಯಸ್ಥವಾದಾಗ ಅವನು ಭಗವಂತನ ಸ್ವರೂಪವನ್ನು ಧ್ಯಾನಿಸಬಹುದು. ಇದು ಜ್ಞಾನಮಾರ್ಗದ ರೀತಿ. ಅದ್ವೈತ ವೇದಾಂತದ ಕೆಲವು ತಾತ್ತ್ವಿಕರ ಪ್ರಕಾರ, ತತ್ತ್ವವನ್ನು ಅರಿತುಕೊಳ್ಳುವುದೇ ಒಂದು ಸಾಧನೆ. ಸರಿಯಾಗಿ ತತ್ತ್ವವನ್ನು ಅರಿತಾಗ ಸಾಕ್ಷಾತ್ಕಾರ ತಾನಾಗಿಯೇ ಉಂಟಾಗುವುದು. ಅದಕ್ಕಾಗಿ ಸಾಧನೆಯ ಅಗತ್ಯವಿಲ್ಲ. ಇನ್ನೂ ಕೆಲವು ಆಚಾರ್ಯರ ಪ್ರಕಾರ, ತತ್ತ್ವವನ್ನು ಅರಿತರೂ ಕೂಡ ಧ್ಯಾನಸಾಧನೆಯಿಂದ ಅದನ್ನು ಅಂತರಂಗದಲ್ಲಿ ಕಂಡುಕೊಳ್ಳಬೇಕು, ಅನುಭವಿಸಬೇಕು. ಉಪನಿಷತ್ತುಗಳಲ್ಲಿ ಈ ಜ್ಞಾನವನ್ನು 'ಅರಿತರೆ' ಸಾಕು, ಅವನು ಮುಕ್ತನಾಗುವನು ಎನ್ನಲಾಗಿದೆ. ಇದನ್ನು ಮೇಲೆ ಹೇಳಿದ ಎರಡೂ ರೀತಿ ಅರ್ಥೈಸುವುದು ಸಾಧ್ಯವಿದೆ. ತತ್ತ್ವವು ಸರಿಯಾಗಿ ಅರ್ಥವಾದಾಗಲೇ ಅವನು ಮುಕ್ತನಾಗುವನು ಎಂದರೆ, ಸಾಧಕನು ಮುಕ್ತನಾದಾಗಲೇ ಅವನಿಗೆ ತತ್ತ್ವ ಸರಿಯಾಗಿ ಅರ್ಥವಾಗುವುದು ಎಂದಂತೆ — ಎಂಬುದು ಮೊದಲನೆಯ ಅಭಿಪ್ರಾಯ; ಹಾಗಾಗಿ ಸರಿಯಾಗಿ 'ಅರಿಯುವುದು' ಎಂದರೆ

ಮನಸ್ಸು–ಬುದ್ಧಿಗಳಿಂದ ಅರಿಯುವುದಲ್ಲ; ಧ್ಯಾನಾದಿ ಸಾಧನೆಗಳಿಂದ ಒಬ್ಬನು ಹಂತಹಂತವಾಗಿ ಉನ್ನತ ಸ್ಥಿತಿಗೇರಿ, ಅಂತಿಮವಾಗಿ ಪಡೆಯುವ ಸಾಕ್ಷಾತ್ಕಾರದ ಅನುಭವವನ್ನೇ ಅಲ್ಲಿ 'ಅರಿಯುವುದು' ಎನ್ನಲಾಗಿದೆ – ಇದು ಎರಡನೆಯ ಅಭಿಪ್ರಾಯ. ಒಟ್ಟಿನಲ್ಲಿ, ತತ್ತ್ವದ ಅರಿವು, ಅಧ್ಯಯನ ಹಾಗೂ ಚಿಂತನೆ ಈ ಮಾರ್ಗದಲ್ಲಿ ಅತ್ಯಗತ್ಯ ; ಅದನ್ನು ಮಾಡದೆ ಸಾಧಕನು ಮುಂದುವರಿಯಲಾಗದು.

ಈ ಎರಡು ಮಾರ್ಗಗಳಲ್ಲಿ ಕಂಡುಬರುವ ಭಿನ್ನತೆಯನ್ನು ಗಮನಿಸಿದಾಗ, ಮಾನವನ ಸ್ವಭಾವದಲ್ಲೇ ಇರುವ ಭಿನ್ನತೆ ಇವುಗಳನ್ನು ರೂಪಿಸಿರಬಹುದು ಅನ್ನಿಸುತ್ತದೆ. ಕೆಲವರಿಗೆ ಭಾವುಕತೆ ಹೆಚ್ಚು; ಅವರು ಭಾವಪ್ರಧಾನವಾದ ಭಕ್ತಿಮಾರ್ಗದತ್ತ ಆಕರ್ಷಿತರಾಗುತ್ತಾರೆ. ಇನ್ನು ಕೆಲವರಿಗೆ ವಿಚಾರ, ಬೌದ್ಧಿಕತೆ ಹೆಚ್ಚು. ಅವರು ಬುದ್ಧಿಪ್ರಧಾನವಾದ ಜ್ಞಾನಮಾರ್ಗದತ್ತ ವಾಲುತ್ತಾರೆ. ವಿಭಿನ್ನ ಸ್ವಭಾವದ ಜನರು ಈ ಎರಡು ಬಗೆಯ ಮಾರ್ಗಗಳನ್ನು ಆಯ್ದುಕೊಳ್ಳಲು ಅನುಕೂಲವಾಗಲಿ ಎಂದು ಹೀಗೆ ಎರಡು ಅಥವಾ ಇನ್ನೂ ಅನೇಕ ಮಾರ್ಗಗಳನ್ನು ರೂಪಿಸಿದರೆ? ಚಾರಿತ್ರಿಕವಾಗಿ ಇದನ್ನು ಅರಿತುಕೊಳ್ಳಲು ಖಚಿತವಾದ ಯಾವುದೇ ಮಾಹಿತಿ ಲಭಿಸುವುದಿಲ್ಲ. ಆದರೂ, ಅತ್ಯಂತ ಪ್ರಾಚೀನ ಸಾಹಿತ್ಯವೆನಿಸಿಕೊಂಡ ವೇದ, ಉಪನಿಷತ್ತುಗಳಲ್ಲಿ ಈ ಕುರಿತ ಕೆಲವು ಮಾಹಿತಿಗಳು ದೊರಕುತ್ತವೆ.

## ವೇದೋಪನಿಷತ್ತುಗಳಲ್ಲಿ ಭಕ್ತಿ, ಜ್ಞಾನಗಳ ಉಗಮ

ಉಪನಿಷತ್ತುಗಳಲ್ಲಿ ತತ್ತ್ವ ಚಿಂತನೆ, ಜಿಜ್ಞಾಸೆ ಹಾಗೂ ತರ್ಕ ಹಲವು ರೀತಿಗಳಲ್ಲಿ ಕಂಡುಬರುತ್ತವೆ. ಪ್ರಧಾನವಾಗಿ ಉಪನಿಷತ್ತುಗಳು ಜ್ಞಾನಮಾರ್ಗ ಎಂದೇ ಹೇಳಬೇಕು. ಆದರೆ ವೇದಗಳ ಸಂಹಿತಾಭಾಗಗಳಲ್ಲಿ ಕಂಡುಬರುವ ಅನೇಕ ಮಂತ್ರಗಳಲ್ಲಿ ಉಪಾಸನೆಯ ಭಾಗಗಳು ಭಕ್ತಿಭಾವ ಭರಿತವಾಗಿವೆ; ಅವುಗಳಲ್ಲಿ ಆಯಾ ದೇವತೆಯ ಸ್ತುತಿ, ಪ್ರಾರ್ಥನೆ ಹಾಗೂ ವರ್ಣನೆ ಕಂಡು ಬರುತ್ತವೆ. ನಡುನಡುವೆ ಬೌದ್ಧಿಕ ವಿಚಾರಗಳ ಮಿಂಚು ಅಲ್ಲಿ ಕಾಣಬಹುದಾದರೂ, ಯಜ್ಞಯಾಗಗಳಲ್ಲಿ ಬಳಕೆಯಾಗುವ ವಿವಿಧ ಸೂಕ್ತಗಳಲ್ಲಿ ದೇವತೆಗಳನ್ನು ಕುರಿತು ಬೇಡುವುದು, ಅವರನ್ನು ಹಾಡಿ ಹೊಗಳುವುದು ಕಂಡುಬರುತ್ತದೆ. ಬಹುಶಃ ಸಾವಿರಾರು ವರ್ಷಗಳ ಅಂತರದಲ್ಲಿ ರಚಿತವಾದ ವೇದೋಪನಿಷತ್ತುಗಳೇ ಜ್ಞಾನ ಮತ್ತು ಭಕ್ತಿ ಮಾರ್ಗಗಳನ್ನು ರೂಪಿಸಿದವು ಎನ್ನಬೇಕು. ಜ್ಞಾನಪ್ರಧಾನವಾದ ಉಪನಿಷತ್ತುಗಳಲ್ಲೇ ಕೆಲವೆಡೆ ಅರಿವಿನ, ತತ್ತ್ವದ, ಜ್ಞಾನಮಾರ್ಗದ ಮಹಿಮೆಯನ್ನು ಹೊಗಳಿರುವುದರಿಂದ, ಅದು ಅನಂತರ ರೂಪುಗೊಂಡ ಮಾರ್ಗವೆಂದೂ, ಬೌದ್ಧಿಕ ಮಾರ್ಗದಲ್ಲಿ ಆತ್ಮಸಾಕ್ಷಾತ್ಕಾರವನ್ನೂ ಕಂಡುಕೊಳ್ಳುವುದು ಭಕ್ತಿ–ಭಾವ–ಪ್ರಾರ್ಥನೆಗಿಂತ ಬೇರೆಯಾದದ್ದು ಅನಂತರವೆಂದೂ ಹೇಳಬಹುದು.

## ನಡುವೆ ಕಾಣುವ ಸಮನ್ವಯ

ಹೀಗಿದ್ದರೂ, ವೇದೋಪನಿಷತ್ತುಗಳಲ್ಲಿ ಈ ಎರಡು ಮಾರ್ಗಗಳ ಸ್ಪಷ್ಟ ಭಿನ್ನತೆ ಕಂಡುಬರುತ್ತದೆ ಎನ್ನಲಾಗುವುದಿಲ್ಲ. ವೈದಿಕ ಮಂತ್ರಗಳಲ್ಲಿ ಅನೇಕ ಕಡೆ ಪ್ರಾರ್ಥನೆಗಳ ನಡುವೆಯೇ ತಾತ್ತ್ವಿಕ ಜಿಜ್ಞಾಸೆ ಕಂಡುಬರುತ್ತದೆ. (ಉದಾ: ಹಿರಣ್ಯಗರ್ಭಸೂಕ್ತ, ನಾಸದೀಯಸೂಕ್ತ ಇತ್ಯಾದಿ) ಅದೇ ರೀತಿ ಉಪನಿಷತ್ತುಗಳಲ್ಲೂ ಪರಮಾತ್ಮನನ್ನು ಕುರಿತು ಭಕ್ತಿಭಾವಭರಿತವಾದ ಪ್ರಾರ್ಥನೆಗಳಿವೆ. ಇದರಿಂದ ಸ್ಪಷ್ಟವಾಗುವುದೇನೆಂದರೆ, ಎಲ್ಲ ಬಗೆಯ ಸಾಧಕರಲ್ಲೂ ಈ ಎರಡೂ ಬಗೆಯ ಸಾಧನೆಯ ಕ್ರಮಗಳು ಅಲ್ಲಲ್ಲಿ ಸಮನ್ವಯಗೊಂಡಿದ್ದವು ಎಂದು. ಇದನ್ನು ನಾವು ಅನೇಕ ಮಂದಿ ಸಂತರ, ಮಹಾತ್ಮರ ಜೀವನದಲ್ಲೂ ಕಾಣಬಹುದಾಗಿದೆ. ಶ್ರೀಕೃಷ್ಣನು ಉಪದೇಶಿಸಿದ ಭಗವದ್ಗೀತೆಯಲ್ಲಿ ಎರಡನೆಯ, ನಾಲ್ಕನೆಯ ಹಾಗೂ ಆರನೆಯ ಅಧ್ಯಾಯದಲ್ಲಿ ಜ್ಞಾನಕ್ಕೆ ಪ್ರಾಧಾನ್ಯತೆಯಿದ್ದರೆ, ಏಳನೇ ಅಧ್ಯಾಯ, ಹಾಗೂ ಇನ್ನುಳಿದ ಅಧ್ಯಾಯಗಳಲ್ಲಿ ಭಕ್ತಿಪ್ರಾಧಾನ್ಯವಿದೆ. ಶ್ರೀ ಶಂಕರರು ಜ್ಞಾನಪಾರಮ್ಯವನ್ನು ಎತ್ತಿಹಿಡಿದಿದ್ದರೂ, ಭಕ್ತಿಯ ಹಿರಿಮೆಯನ್ನು ಅಲ್ಲಗಳೆಯಲಿಲ್ಲ. ಅವರ ಜೀವನ ಹಾಗೂ ಕೃತಿಗಳಲ್ಲಿ ಭಕ್ತಿ ಹಾಸುಹೊಕ್ಕಾಗಿದೆ. ಅದೇ ರೀತಿ ಚೈತನ್ಯ ಮಹಾಪ್ರಭುಗಳಲ್ಲಿ ಕೂಡ. ಭಕ್ತಿಪಂಥದ ಸಂತರುಗಳಲ್ಲಿ ಅನೇಕರು ದೊಡ್ಡ ವಿದ್ವಾಂಸರೂ, ವೇದಾಂತವನ್ನು ಆಳವಾಗಿ ಅರಿತವರೂ ಆಗಿದ್ದರು.

## ಶ್ರೀರಾಮಕೃಷ್ಣರ ಮಾತು: ಜ್ಞಾನ ಮಿಶ್ರಿತ ಭಕ್ತಿ

ಶ್ರೀರಾಮಕೃಷ್ಣರಲ್ಲಿ ಕಂಡುಬರುವ ಒಂದು ವಿಶೇಷ ಸಂಗತಿಯೆಂದರೆ, ಭಕ್ತಿ–ಜ್ಞಾನಗಳ ಸುಂದರ ಸಮನ್ವಯ. ಸ್ವಾಮಿ ವಿವೇಕಾನಂದರು ಹೇಳುವಂತೆ ಅವರು, 'ಅದ್ವಯ ತತ್ತ್ವವನ್ನು ಅಳವಡಿಸಿಕೊಂಡ ಚಿತ್ತದೊಂದಿಗೆ, ಭಕ್ತಿಯೆಂಬ ಪರದೆಯಿಂದ ಆವೃತರಾಗಿ ಇರುವವರು'. ಇನ್ನೊಂದೆಡೆ ಸ್ವಾಮೀಜಿ ಹೇಳುತ್ತಾರೆ, ಶ್ರೀರಾಮಕೃಷ್ಣರ ಬಾಹ್ಯದಲ್ಲೆಲ್ಲ ಭಕ್ತಿ, ಅಂತರ್ಯದಲ್ಲೆಲ್ಲ ಜ್ಞಾನ; ಸ್ವತಃ ಸ್ವಾಮೀಜಿ ಬಾಹ್ಯದಲ್ಲಿ ಜ್ಞಾನ; ಅಂತರಂಗದಲ್ಲೆಲ್ಲ ಭಕ್ತಿ ಎಂದು. ಶ್ರೀರಾಮಕೃಷ್ಣರು ತಮ್ಮ ಶಿಷ್ಯಂದಿರಿಗೆ 'ಜ್ಞಾನಮಿಶ್ರಿತ ಭಕ್ತಿ'ಯನ್ನು ಉಪದೇಶಿಸಿದರು. ಅದೇರೀತಿ ಸ್ವಾಮೀಜಿ ಕೂಡ, ಸಾಧಕನಲ್ಲಿ ಭಕ್ತಿ–ಜ್ಞಾನಗಳೆರಡೂ ಪೂರಕವಾಗಿದ್ದುಕೊಂಡು ಅವನನ್ನು ಸಾಕ್ಷಾತ್ಕಾರದತ್ತ ಮುನ್ನಡೆಸಬೇಕು ಎಂದಿದ್ದಾರೆ.

ಹಲವು ಬಾರಿ ಶ್ರೀರಾಮಕೃಷ್ಣರ ಉಪದೇಶಗಳಲ್ಲಿ ಜ್ಞಾನ, ತರ್ಕ ಇವುಗಳನ್ನು ತಿರಸ್ಕರಿಸುವ ಭಾವ ಕಂಡುಬರುತ್ತದೆ. ಭಕ್ತಿಯೊಂದೇ ಮುಕ್ತಿಗೆ ಸಾಕು ಎಂದು ಅವರು ಖಚಿತವಾಗಿ ಹೇಳಿದ್ದರು. ಆದರೂ ವೇದಾಂತ, ಶಾಸ್ತ್ರಸಾರ, ವಿಚಾರ — ಇದನ್ನು ಅವರು ಅಲ್ಲಗಳೆಯಲಿಲ್ಲ. ''ಎಲ್ಲ ಶಾಸ್ತ್ರಗಳ ಸಾರವೇನು ಎಂಬುದನ್ನು ಜಗನ್ಮಾತೆ ನನಗೆ ತಿಳಿಸಿಕೊಟ್ಟಿದ್ದಾಳೆ'' ಎಂದು ಅವರು ಹೇಳಿದ್ದಾರೆ. ಈ ಮೂಲಕ ಶಾಸ್ತ್ರಗಳ ಸಾರ ಸತ್ಯವನ್ನೇ ಹೇಳುತ್ತದೆ

ಎಂದು ದೃಢಪಡಿಸಿದಂತಾಯಿತು. ಅಂತೆಯೇ ಅವರ ನೇರ ಶಿಷ್ಯಂದಿರಲ್ಲಿ ಹಲವರು, ವಿಶೇಷತಃ ಸ್ವಾಮಿ ವಿವೇಕಾನಂದರು, ಸ್ವಾಮಿ ತುರೀಯಾನಂದರು ಹಾಗೂ ಸ್ವಾಮಿ ಅಭೇದಾನಂದರು ಆಳವಾಗಿ ಶಾಸ್ತ್ರಗಳನ್ನು ಅಧ್ಯಯನ ಮಾಡಿದ್ದರು ಹಾಗೂ ತತ್ತ್ವ ಚಿಂತನೆ, ವಿಚಾರ ನಡೆಸುತ್ತಿದ್ದರು. ಜ್ಞಾನದ ನಿಷೇಧ, ತಿರಸ್ಕಾರವನ್ನು ಹೇಳಿದ್ದರೆ, ಅದು ಭಕ್ತಿಪಾರಮ್ಯವನ್ನು ಎತ್ತಿಹಿಡಿಯುವುದಕ್ಕಾಗಿ ಎಂದು ಭಾವಿಸಬೇಕು.

### ಬೌದ್ಧಿಕ ವಿಕಾಸ ಹಾಗೂ ಆಧ್ಯಾತ್ಮಿಕತೆ

ಆಧ್ಯಾತ್ಮಿಕ ಸಾಧಕನು ಯಾವ ಮಾರ್ಗವನ್ನೇ ಅನುಸರಿಸಲಿ ಅವನಲ್ಲಿ ಬೌದ್ಧಿಕ ವಿಕಾಸ ಹಾಗೂ ಆಧ್ಯಾತ್ಮಿಕ ಪ್ರಗತಿ ಜೊತೆಜೊತೆಯಾಗಿಯೇ ಮುನ್ನಡೆಯುವುದನ್ನು ನಾವು ಗಮನಿಸಬೇಕು. ಯೋಗಶಾಸ್ತ್ರದಲ್ಲಿ ಇದನ್ನು 'ಮೇಧಾನಾಡಿ' ಜಾಗೃತವಾಗುವುದು ಎಂದೂ, ಭಕ್ತಿಪಂಥದಲ್ಲಿ 'ಭಕ್ತಿಯ ಉದಯ'ವೆಂದೂ, ವೇದಾಂತದಲ್ಲಿ 'ಆಧ್ಯಾತ್ಮಿಕ ಜ್ಞಾನದ ವಿಕಾಸ'ವೆಂದೂ ಕರೆಯುತ್ತಾರೆ. ಸಾಧಕನು ಭಗವಂತನ ಹತ್ತಿರ ಹತ್ತಿರ ಹೋದಂತೆ ಅವನ ಅರಿವು, ಬೌದ್ಧಿಕ ಶಕ್ತಿ ಎಲ್ಲವೂ ಸೂಕ್ಷ್ಮಗೊಳ್ಳುತ್ತವೆ; ಅದರಿಂದ ಅವನು ಇನ್ನಷ್ಟು ಮುನ್ನಡೆಯುತ್ತಾನೆ. ಹೀಗೆ ಮುಂದುವರಿಯುವ ಸಾಧಕನು ಶಾಸ್ತ್ರದಲ್ಲಿ ಹೇಳಿದ, ತತ್ತ್ವಗಳು ತಿಳಿಸಿಕೊಡುವ ಸಂಗತಿಗಳನ್ನು ತಮ್ಮ ಅನುಭವಗಳೊಂದಿಗೆ ಹೋಲಿಸಿ ನೋಡಿ, ತನ್ನ ಅನುಭವವನ್ನು ದೃಢೀಕರಿಸುತ್ತಾನೆ; ಅಂತೆಯೇ ಶಾಸ್ತ್ರಗಳು, ತತ್ತ್ವಗಳು ಸತ್ಯವೆಂಬುದನ್ನೂ ಖಚಿತಪಡಿಸುತ್ತಾನೆ. ಶ್ರೀರಾಮಕೃಷ್ಣರೇ ಇದಕ್ಕೆ ಅತ್ಯುತ್ತಮ ಉದಾಹರಣೆಯಾಗಬಲ್ಲರು. ಸ್ವತಃ ಅವರೇ ಶಾಸ್ತ್ರ, ತತ್ತ್ವಗಳನ್ನು ಅರಿತುಕೊಳ್ಳದಿದ್ದರೂ, ಇತರರ ಮೂಲಕ ಅವರು ಎರಡನ್ನೂ ದೃಢೀಕರಿಸಿಕೊಂಡರು. ಈ ಕಾರಣಕ್ಕಾಗಿ ತತ್ತ್ವ, ವಿಚಾರಗಳ ಆವಶ್ಯಕತೆ ಸಾಧಕನಿಗೆ ಅತ್ಯಗತ್ಯ ಎನ್ನಬೇಕಾಗಿದೆ.

### ಭಾವ-ಬುದ್ಧಿಗಳ ಸಂಗಮ

ಆಧ್ಯಾತ್ಮಿಕ ಸಾಧಕನು ಕೇವಲ ಭಕ್ತಿಯೊಂದನ್ನೇ ಅವಲಂಬಿಸಿದ್ದರೆ, ಅವನು ಭಾವಾತಿರೇಕ ಹಾಗೂ ಭಾವವಿಚಾರಗಳಿಗೆ ಒಳಗಾಗಿ ಹಾದಿತಪ್ಪುವ ಅಪಾಯವಿದೆ; ಅದೇ ರೀತಿ ಜ್ಞಾನವನ್ನಷ್ಟೇ ಅವಲಂಬಿಸುವ ಸಾಧಕನು ಅಹಂಕಾರಕ್ಕೆ ಒಳಗಾಗುವ ಸಾಧ್ಯತೆಯಿದೆ – ಅಂಥವನಿಗೆ ಭಕ್ತಿಮಾರ್ಗದ ಶರಣಾಗತಿ, ಸಮರ್ಪಣಾಭಾವ ಹಾಗೂ ಅಹಂಕಾರಶೂನ್ಯತೆ ಸಹಾಯಕ — ಇದು ಸ್ವಾಮಿ ವಿವೇಕಾನಂದರು ನೀಡುವ ಸೂಚನೆ. ಅವತಾರ ಪುರುಷರು, ಸಂತರು, ಮಹಾತ್ಮರು ಹಾಗೂ ಶ್ರೇಷ್ಠ ಸಾಧಕರೆಲ್ಲ ಹೃದಯ-ಬುದ್ಧಿಗಳೆರಡರ ಪರಿಪೂರ್ಣ ಸಂಗಮವಾಗಿದ್ದರು. ಇನ್ನೂ ಸಾಧನಾವಸ್ಥೆಯಲ್ಲಿ ಇರುವವರು ಪ್ರಯತ್ನಪೂರ್ವಕವಾಗಿಯಾದರೂ ಈ ಎರಡೂ ಗುಣಗಳನ್ನು ವೃದ್ಧಿಗೊಳಿಸಿಕೊಂಡು ಸಮನ್ವಯ ಮಾಡಿಕೊಳ್ಳುವುದು ಅತ್ಯಗತ್ಯ ಎಂಬುದು ಇದರಿಂದ ತಿಳಿದುಬರುತ್ತದೆ. ಶ್ರೀರಾಮಕೃಷ್ಣರು ಹೇಳುವಂತೆ, ಭಗವಂತನನ್ನು ಹಲವು ದಾರಿಗಳಿಂದ ಸಮೀಪಿಸಬಹುದು; ಆದ್ದರಿಂದ ಎಲ್ಲ ಮಾರ್ಗಗಳೂ ಸತ್ಯವೆ.

### ಸಾಧನೆಯ ಹಂತದಲ್ಲಿ ಭಕ್ತಿ ಮತ್ತು ಜ್ಞಾನ

ಭಗವಂತನ ಸಾಕ್ಷಾತ್ಕಾರಕ್ಕಾಗಿ ಸಾಧನೆ ಮಾಡುವವನಿಗೆ ಭಕ್ತಿ ಅಥವಾ ಜ್ಞಾನ — ಈ ಎರಡೂ ಮಾರ್ಗಗಳಲ್ಲಿರುವ ಉತ್ತಮ ಅಂಶಗಳನ್ನು ಸಮನ್ವಯಗೊಳಿಸಿ, ತನ್ನ ಸಾಧನೆ ಇನ್ನಷ್ಟು ಮುಂದುವರಿಯುವಂತೆ ಮಾಡುವುದು ಸಾಧ್ಯವಿದೆ. ಭಕ್ತಿಮಾರ್ಗವನ್ನು ಅನುಸರಿಸುವ ಸಾಧಕನು ಜ್ಞಾನಮಾರ್ಗದ ತತ್ತ್ವ, ವಿಚಾರಗಳನ್ನು ತಿರಸ್ಕರಿಸುವ ಬದಲು, ಅಲ್ಲಿನ ವಿಶೇಷತೆಯಾದ ಸತ್ಯನಿಷ್ಠೆ, ತರ್ಕ, ವೈಚಾರಿಕತೆಗಳನ್ನು ತನ್ನ ತಿಳಿವಳಿಕೆಯನ್ನು ಬಲಪಡಿಸುವ ಸಲುವಾಗಿ ಬಳಸಿಕೊಳ್ಳಬಹುದು. ತಾನು ನಂಬಿರುವ ದೇವರು ಸಾಕಾರನಾಗಿದ್ದರೂ, ಅವನಿಗೆ ನಿರಾಕಾರ ಸ್ವಭಾವವೂ ಇದೆಯೆಂದು ಅವನು ಭಾವಿಸಿದರೆ ಅವನ ಭಕ್ತಿಗೆ ಹಾನಿಯಾಗದು; ಬದಲಾಗಿ ಭಗವಂತನ ಅನಂತ ಸಾಮರ್ಥ್ಯಕ್ಕೆ ಅದು ಪುಷ್ಟಿ ನೀಡುವುದು. ಇದೇ ರೀತಿ, ಜ್ಞಾನಮಾರ್ಗದ ಸಾಧಕನಿಗೆ ಭಕ್ತಿಮಾರ್ಗದಲ್ಲಿ ಕಂಡುಬರುವ ವ್ಯಾಕುಲತೆ, ಶರಣಾಗತಿ, ಪ್ರೇಮ, ಏಕನಿಷ್ಠೆ ಇವೆಲ್ಲವೂ ಪ್ರೇರಣೆ ನೀಡಬಹುದು. ನಿರಾಕಾರ-ನಿರ್ಗುಣ ದೇವರ ಧ್ಯಾನವನ್ನು ಯಾವಾಗಲೂ ಮಾಡಬಲ್ಲ ಸ್ಥಿತಿಯನ್ನು ತಲುಪುವವರೆಗೂ ಅವನು ಭಕ್ತಿಯ ವೈವಿಧ್ಯಮಯ ಆಚರಣೆಗಳಲ್ಲಿ ತೊಡಗುವುದರಿಂದ ಅವನ ತಾತ್ತ್ವಿಕ ಮನೋಧರ್ಮಕ್ಕೆ ಯಾವ ಹಾನಿಯೂ ಉಂಟಾಗದು. ಒಂದು ಮಾರ್ಗ ಇನ್ನೊಂದನ್ನು ಪರಿಪೂರ್ಣಗೊಳಿಸಬೇಕು; ಆಗಲೇ ಸರಿಯಾದ ವಿಶಾಲದೃಷ್ಟಿ ಸಾಧಕನಿಗೆ ಪ್ರಾಪ್ತವಾಗುವುದು.

ಸಾಧನೆ ಮಾಡುವವರು ಯಾವ ಪ್ರೇರಣೆಯನ್ನು ಹೊಂದಿ ಆಧ್ಯಾತ್ಮಿಕ ಜೀವನಕ್ಕೆ ಕಾಲಿಟ್ಟರೂ ಸರಿ, ತತ್ತ್ವಜ್ಞಾನ ಹೊಂದಿರುವುದು ಹಲವು ಕಾರಣಗಳಿಂದ ಅವನಿಗೆ ಅಗತ್ಯವಾಗಿದೆ. ಆತ್ಮಾವಲೋಕನ, ಸ್ವಯಂವಿಮರ್ಶೆ, ಆತ್ಮನಿವೇದನೆಗಳಂಥ ಮಾನಸಿಕ ಕ್ರಿಯೆಗಳಿಂದ ಅವನಿಗೆ ತನ್ನ ನೆಲೆಯನ್ನು ಅರಿತುಕೊಳ್ಳುವುದು ಸಾಧ್ಯವಿದೆ. ನಿರಂತರ ಏರುಪೇರುಗಳಿಗೆ ಒಳಗಾಗುವ ಮನಸ್ಸು, ದೇಹ, ಇಂದ್ರಿಯಗಳನ್ನು ಹಿಡಿತದಲ್ಲಿಟ್ಟು ಮುನ್ನಡೆಯಲು ಈ ಬಗೆಯ ಕ್ರಿಯೆಗಳು ಅತಿಹೆಚ್ಚಿನ ಸಹಾಯವನ್ನು ಮಾಡುತ್ತವೆ. ಭಿನ್ನತೆ ಕಂಡುಬರುವಲ್ಲಿ ಸಮನ್ವಯ ಸಾಧಿಸುವುದು ಆಧ್ಯಾತ್ಮಿಕ ಮಾರ್ಗದಲ್ಲಿ ಹೆಚ್ಚು ಪ್ರಯೋಜನಕಾರಿಯಾಗಿದೆ. ❋

### ಫೆಬ್ರವರಿ ತಿಂಗಳ ಕಾರ್ಯಕ್ರಮಗಳು

| | | |
|---|---|---|
| ೬ | ಬುಧವಾರ | ಸ್ವಾಮಿ ಬ್ರಹ್ಮಾನಂದ ಜಯಂತಿ |
| ೯ | ಶನಿವಾರ | ಸ್ವಾಮಿ ತ್ರಿಗುಣಾತೀತಾನಂದ ಜಯಂತಿ |
| ೧೬ | ಶನಿವಾರ | ಏಕಾದಶಿ |
| ೧೯ | ಮಂಗಳವಾರ | ಸ್ವಾಮಿ ಅದ್ಭುತಾನಂದ ಜಯಂತಿ |

# ದಿವ್ಯಾನುರಾಗ



❁ ಭಗವಂತನನ್ನು ಪ್ರೀತಿಸುವುದು–ಇದೇ ಜೀವನದ ಉದ್ದೇಶ; ಬೃಂದಾವನದಲ್ಲಿ ಗೋಪ–ಗೋಪಿಯರು, ಗೋವಳಿಗರು ಶ್ರೀಕೃಷ್ಣನನ್ನು ಪ್ರೀತಿಸುತ್ತಿದ್ದ ಹಾಗೆ. ಕೃಷ್ಣ ಮಥುರೆಗೆ ಹೊರಟು ಹೋದನಂತರ ಗೋವಳಿಗರು ಆತನ ವಿರಹ ದಿಂದ ಅಳುತ್ತ ಅಳುತ್ತ ಸುಮ್ಮನೆ ಸುತ್ತಾಡು ತ್ತಿದ್ದರು.

❁ ಭಗವಂತನಲ್ಲಿ ಅನುರಾಗ ಹುಟ್ಟಿಸು ತ್ತದೆ; ಆತನನ್ನು ಪ್ರೀತಿಸುವಂತೆ ಮಾಡುತ್ತದೆ. ವ್ಯಾಕುಲತೆ ಉಂಟಾಗದಿದ್ದರೆ ಏನೂ ದೊರಕದು. ಸಾಧುಸಂಗ ಮಾಡುತ್ತ ಮಾಡುತ್ತ ಭಗವಂತನಿಗಾಗಿ ಪ್ರಾಣ ವ್ಯಾಕುಲಪಡಲಾರಂಭಿಸುತ್ತದೆ. ಮನೆಯಲ್ಲಿ ಯಾರಿಗಾದರೂ ಅಸೌಖ್ಯವಾದರೆ ಆತನನ್ನು ಗುಣಪಡಿಸುವುದು ಹೇಗೆ ಎಂಬು ದಾಗಿ ಸರ್ವದಾ ಮನಸ್ಸು ವ್ಯಾಕುಲಪಡುತ್ತಾ ಇರುತ್ತದೆಯಲ್ಲಾ ಹಾಗೆ. ಕೆಲಸ ಕಳೆದುಕೊಂಡ ವ್ಯಕ್ತಿ ಯಾವ ರೀತಿ ವ್ಯಾಕುಲತೆಯಿಂದ ಒಂದು ಆಫೀಸಿನಿಂದ ಇನ್ನೊಂದು ಆಫೀಸಿಗೆ ಅಲೆಯುತ್ತಾ ಇರು ತ್ತಾನೋ ಹಾಗೆ.

❁ ಭಗವಂತನಲ್ಲಿ ಅನುರಾಗ ಉಂಟಾಯಿತು ಎಂದರೆ, ಈ ಕರ್ಮಗಳ ವಿಷಯವಾಗಿ ಅತಿಯಾಗೇನು ತಲೆಗೆ ಹಚ್ಚಿಕೊಳ್ಳ ಬೇಕಾಗಿಲ್ಲ. ಗಾಳಿ ಬೀಸದವರೆಗೆ ಮಾತ್ರವೇ ಬೀಸಣಿಗೆಯ ಆವಶ್ಯ ಕತೆ. ತಂಗಾಳಿ ಬೀಸಲಾರಂಭಿಸಿತು ಎಂದರೆ ಬೀಸಣಿಗೆಯನ್ನು ಕೆಳಕ್ಕೆ ಇಟ್ಟುಬಿಡಬಹುದು, ಬಳಿಕ ಬೀಸಣಿಗೆಯ ಆವಶ್ಯಕತೆಯೇನಿದೆ?

❁ ಭಗವಂತನಲ್ಲಿ ನಿನಗೆ ಭಕ್ತಿಪ್ರೇಮ ದೊರೆತಷ್ಟೂ ನಿನ್ನ ಕರ್ಮ ಕಡಿಮೆ ಕಡಿಮೆಯಾಗುತ್ತಾ ಬಂದುಬಿಡುತ್ತದೆ. ಸೊಸೆ ಗರ್ಭಿಣಿಯಾದರೆ ಅತ್ತೆ ಆಕೆಯ ಕೆಲಸವನ್ನು ಕಡಿಮೆ ಮಾಡಿ ಕೊಡುತ್ತಾಳೆ. ತಿಂಗಳು ಆದಷ್ಟೂ ಆಕೆಯ ಪಾಲಿನ ಕೆಲಸ ಕಡಿಮೆ ಕಡಿಮೆಯಾಗುತ್ತಾ ಹೋಗುತ್ತದೆ. ಒಂಭತ್ತು ತಿಂಗಳು ತುಂಬಿತು ಎಂದರೆ, ಹೊಟ್ಟೆಯಲ್ಲಿ ಮಗುವಿಗೆ ಏನಾದರೂ ಅಪಾಯ ಸಂಭ ವಿಸಬಹುದೊ, ಹೆರಿಗೆ ಸಮಯದಲ್ಲಿ ಏನಾದರೂ ತೊಂದರೆ ಯಾಗಬಹುದೊ ಏನೊ ಎಂದು ಹೆದರಿ ಆಕೆಯ ಕೈಯಲ್ಲಿ ಯಾವ ಕೆಲಸವನ್ನೂ ಮಾಡಿಸುವುದೇ ಇಲ್ಲ.

❁ ಭಕ್ತಿಯೇ ಮುಖ್ಯವಾದ್ದು. ಭಗವಂತನೇನೊ ಎಲ್ಲಾ ಭೂತಗಳಲ್ಲಿಯೂ ಇದ್ದಾನೆ. ಇದರಲ್ಲಿ ಸಂದೇಹವೇನಿಲ್ಲ. ಆದರೆ ಭಕ್ತ ಯಾರು ಅಂತೀಯೊ? ಯಾರ ಮನಸ್ಸು ಸರ್ವದಾ ಭಗವಂತ ನಲ್ಲಿಯೇ ರತವಾಗಿದೆಯೋ ಆತ. ಅಹಂಕಾರ, ಅಭಿಮಾನ ಇರುವವರೆಗೆ ಮನಸ್ಸು ಹಾಗೆ ಮಾಡಲಾರದು. 'ಅಹಂ' ರೂಪದ ದಿಣ್ಣೆ ಮೇಲೆ ಭಗವಂತನ ಕೃಪಾರೂಪದ ನೀರು ಶೇಖರವಾಗದು. ಅದು ಕೆಳಕ್ಕೆ ಹರಿದು ಬಂದು ಬಿಡುತ್ತದೆ.

❁ ಅಂತರ್ಯದಲ್ಲಿ ವ್ಯಾಕುಲತೆ ಇದ್ದರೇ ಯಥೇಷ್ಟ. ಭಗವಂತನಲ್ಲಿ ಪ್ರೀತಿ ಇದ್ದರೇ ಸಾಕು. ಆತ ಅಂತರ್ಯಾಮಿ. ನಮ್ಮ ಅಂತರ್ಯ ದಲ್ಲಿರುವ ಪ್ರೀತಿ ವ್ಯಾಕುಲತೆ ಏನು ಎಂಬು ದನ್ನು ಆತ ಅರಿತುಕೊಳ್ಳಬಲ್ಲ. ಉದಾಹರಣೆಗೆ ಒಬ್ಬನಿಗೆ ಅನೇಕ ಮಕ್ಕಳು ಅಂತ ಇಟ್ಟುಕೊಳ್ಳಿ. ದೊಡ್ಡ ಮಕ್ಕಳು ಆತನನ್ನು ಸ್ಪಷ್ಟವಾಗಿ 'ಅಪ್ಪ' 'ಅಯ್ಯ' ಎಂಬುದಾಗಿ ಕರೆಯುತ್ತವೆ. ಆದರೆ ಎಳೆಯ ಮಕ್ಕಳು ಅತಿ ಹೆಚ್ಚೆಂದರೆ 'ಪಾ,' 'ಯಾ' ಎಂಬುದಾಗಿ ಕರೆಯಬಲ್ಲುವು. ಈ ರೀತಿ ಅಸ್ಪಷ್ಟವಾಗಿ ಮಾತನಾಡುವ ಮಕ್ಕಳ ಮೇಲೆ ತಂದೆ ಕೋಪಿಸಿಕೊಳ್ಳುತ್ತಾನೇನು? ತಂದೆಗೂ ಗೊತ್ತಿದೆ, ಅವೂ ತನ್ನನ್ನೇ ಕರೆಯುತ್ತಿವೆ, ಆದರೆ ಅವಕ್ಕೆ ತನ್ನ ಹೆಸರನ್ನು ಸ್ಪಷ್ಟವಾಗಿ ಉಚ್ಚರಿ ಸಲು ಸಾಧ್ಯವಾಗುತ್ತಿಲ್ಲ ಎಂಬುದಾಗಿ. ತಂದೆಗೆ ಎಲ್ಲಾ ಮಕ್ಕಳೂ ಒಂದೇ ಸಮ. ಹಾಗೆಯೇ ಭಕ್ತರೂ ಆತನನ್ನೇ ಕರೆಯುತ್ತಾರೆ, ಆದರೆ ವಿವಿಧ ಹೆಸರುಗಳಿಂದ. ಎಲ್ಲರೂ ಆ ಒಬ್ಬನನ್ನೇ ಕರೆಯು ತ್ತಿರುವುದು. ಭಗವಂತ ಒಬ್ಬನೇ, ಆದರೆ ಆತನಿಗೆ ಹೆಸರು ಮಾತ್ರ ಅನೇಕ.

❁ ಭಗವಂತನಲ್ಲಿ ಶುದ್ಧ ಭಕ್ತಿ ಗಳಿಸಿಕೊಳ್ಳದೆ ಇದ್ದರೆ, ಮುಕ್ತಿ ದೊರಕುವ ಹಾಗೇ ಇಲ್ಲ. ಭಗವಂತನ ಸಾಕ್ಷಾತ್ಕಾರ ಪಡೆದು ಸಂಸಾರದಲ್ಲಿದ್ದರೆ ಹೆದರಿಕೊಳ್ಳಬೇಕಾಗಿಲ್ಲ. ಆಗಾಗ ನಿರ್ಜನ ಪ್ರದೇಶದಲ್ಲಿದ್ದು ಸಾಧನೆ ಮಾಡಿ ಶುದ್ಧ ಭಕ್ತಿ ಗಳಿಸಿಕೊಂಡಿದ್ದೇ ಆದರೆ, ಸಂಸಾರದಲ್ಲಿದ್ದರೂ ಹೆದರಿಕೊಳ್ಳಬೇಕಾಗಿಲ್ಲ. ಚೈತನ್ಯ ದೇವನಿಗೆ ಸಂಸಾರಸ್ಥ ಭಕ್ತರೂ ಇದ್ದರು. ಅವರು ಸಂಸಾರದಲ್ಲಿ ಹೆಸರಿಗೆ ಮಾತ್ರ ಇರುತ್ತಿದ್ದರು, ಅನಾಸಕ್ತರಾಗಿ ಇರುತ್ತಿದ್ದರು.

❁ ವ್ಯಾಕುಲನಾಗಿ ಆತನ ದರ್ಶನಕ್ಕಾಗಿ ಅಳಬಲ್ಲೆಯಾ? ಜನ ಮಕ್ಕಳಿಗಾಗಿ, ಹೆಂಡತಿಗಾಗಿ, ಹಣಕ್ಕಾಗಿ ಬಿಂದಿಗೆ ತುಂಬ ಕಣ್ಣೀರು ಸುರಿಸುತ್ತಾರೆ. ಆದರೆ ಭಗವಂತನಿಗಾಗಿ ಯಾರು ಅಳುತ್ತಾರೆ? ಮಗು ಗಿಲಿಕೆಯಲ್ಲೇ ಮಗ್ನವಾಗಿ ತಾಯಿಯನ್ನು ಮರೆತಿರುವಾಗ ಆಕೆ ಅಡಿಗೆ ಮತ್ತು ಉಳಿದ ಮನೆಕೆಲಸ ಇವನ್ನೆಲ್ಲಾ ಮಾಡುತ್ತಿರು ತ್ತಾಳೆ. ಯಾವಾಗ ಮಗುವಿಗೆ ಗಿಲಿಕೆ, ಉರುಟುಗೋಲು ಯಾವುದೂ ಬೇಡವಾಗಿ, ಅವನ್ನು ಬಿಸಾಡಿ ಚೀತ್ಕಾರಮಾಡುತ್ತ ಅಳಲಾರಂಭಿ ಸುವುದೊ, ಆಗ ತಾಯಿ ಅನ್ನದ ತಪ್ಪಲೆ ಕೆಳಗಿಳಿಸಿ ಓಡಿ ಓಡಿ ಬಂದು ಮಗುವನ್ನು ಕಂಕುಳಿಗೆ ಹಾಕಿಕೊಳ್ಳುತ್ತಾಳೆ.

ಶ್ರೀರಾಮಕೃಷ್ಣ ವಚನವೇದದಿಂದ

# ಶ್ರೀಮಾತೆಯವರ ನೆನಪುಗಳು

ಮೂಲ ಬಂಗಾಳಿ : **ಸ್ವಾಮಿ ಅಭಯಾನಂದ**

ಅನುವಾದ : **ಸ್ವಾಮಿ ಜ್ಞಾನಯೋಗಾನಂದ**

ರಾಮಕೃಷ್ಣ ಮಹಾಸಂಘದಲ್ಲಿ ಶ್ರೀಮಾತೆಯವರು ಹೇಗೆ ದಾರಿದೀಪವಾಗಿದ್ದರು, ದೀಕ್ಷೆಯಿಂದ ಹಿಡಿದು ಸಾಕ್ಷಾತ್ಕಾರದವರೆಗೆ ಅವರು ಭಕ್ತರನ್ನು ಹೇಗೆ ಮುನ್ನಡೆಸುತ್ತಿದರು — ಎಂಬುದು ಅತ್ಯಂತ ವಿಶಿಷ್ಟವಾದ ಸಂಗತಿ. ಶ್ರೀಮಾತೆಯವರ ಸಂನ್ಯಾಸೀ ಶಿಷ್ಯಂದಿರು ಬರೆದ ಸ್ಮೃತಿಲೇಖನಗಳು **'ಮಾಯೇರ್ ಪದಪ್ರಾಂತೇ'** ಎಂದು ಬಂಗಾಳಿಯಲ್ಲಿ ನಾಲ್ಕು ಸಂಪುಟಗಳ ಗ್ರಂಥವಾಗಿ ಪ್ರಕಟವಾಗಿದೆ. ಅದರಲ್ಲಿ ಮೊದಲ ಸಂಪುಟದಲ್ಲಿರುವ ಲೇಖನದ ಅನುವಾದವಿದು. ಲೇಖಕರು ಶ್ರೀಮಾತೆ ಯವರ ಶಿಷ್ಯರು; ಬೇಲೂರು ಮಠದ ಮೇಲ್ವಿಚಾರಕರಾಗಿ ಹಲವು ವರ್ಷ ಸೇವೆ ಸಲ್ಲಿಸಿದ್ದರು.



೧೯೧೨ ರಲ್ಲಿ ನಾನು ಶ್ರೀಮಾತೆಯವರಿಂದ ಮಂತ್ರದೀಕ್ಷೆ ಪಡೆದೆ. ನಾನು ಹೇಗೆ ಶ್ರೀಮಾತೆಯವರ ಆಶ್ರಯವನ್ನು ಹೊಂದಿದೆ ಎಂಬುದನ್ನು ಹೇಳುವ ಮುನ್ನ, ನಾನು ಬೇಲೂರು ಮಠಕ್ಕೆ ಮೊದಲ ಬಾರಿ ಬಂದ ವೃತ್ತಾಂತವನ್ನು ಸಂಕ್ಷಿಪ್ತವಾಗಿ ತಿಳಿಸುವುದು ಅಗತ್ಯ. ಢಾಕಾದಿಂದ ಬೇಲೂರು ಮಠಕ್ಕೆ ಕೆಲವು ದಿನಗಳ ಮಟ್ಟಿಗೆ ಬಂದ ನಾನು ಹೇಗೆ ಅಲ್ಲಿಯೇ ಉಳಿದುಕೊಳ್ಳುವಂತಾಯಿತು ಎಂಬ ವಿಚಾರ ಅದು. ಢಾಕಾದಲ್ಲಿ ನಾನು ಒಂದು ಕ್ರಾಂತಿಕಾರಿ ಸಂಘದೊಂದಿಗೆ ಸೇರಿಕೊಂಡಿದ್ದೆ. ಆ ಸಂಘದ ಹೆಸರು 'ಅನುಶೀಲನ ಸಮಿತಿ' ಎಂದಾಗಿತ್ತು. ಆಗ ನಾನಿನ್ನೂ ಹುಡುಗ; ನನಗೆ ಎಲ್ಲವೂ ಅರ್ಥವಾಗುತ್ತಿರಲಿಲ್ಲ. ಢಾಕಾದಲ್ಲಿ 'ಅನುಶೀಲನ ಸಮಿತಿ'ಯು ಸೇರುವ ಒಂದು ಸ್ಥಳವಿತ್ತು — ಆ ಸ್ಥಳ ಹಾಸ್ಟೆಲಿನಂತಿತ್ತು. ಮನೆ ಬಿಟ್ಟು ಬಂದ ಕೆಲವು ಮಂದಿ ಹುಡುಗರು ಅಲ್ಲಿ ವಾಸವಾಗಿದ್ದರು. ಕೆಲವು ದಿನಗಳ ಕಾಲ ಅವರೊಂದಿಗೆ ಇದ್ದ ನಂತರ ಅವರ ಸಮಿತಿಯ ಕೆಲವು ನೀತಿ, ನಿಯಮಗಳು ನನ್ನ ಮನಸ್ಸಿಗೆ ಸರಿ ಕಾಣಲಿಲ್ಲ. ಆದ್ದರಿಂದ, ಈ ವಿಷಯದಲ್ಲಿ ನನಗೆ ಸರಿಯಾದ ಮಾರ್ಗದರ್ಶನ ನೀಡಬಲ್ಲ ಒಬ್ಬರ ಬಳಿಗೆ ಹೋಗಲು ನಾನು ಕಾತರನಾದೆ. ಹಲವು ಕಾರಣಗಳಿಂದ ರಾಮಕೃಷ್ಣ ಮಠದ ಅಧ್ಯಕ್ಷರಾದ ಸ್ವಾಮಿ ಬ್ರಹ್ಮಾನಂದರ ಉಪದೇಶಗಳು ನನ್ನ ನೆನಪಿಗೆ ಬಂದವು. ಆದರೆ ಅವರ ಬಳಿಗೆ ಹೇಗೆ ಹೋಗಲಿ? ಅವರ ಬಳಿಗೆ ನನ್ನನ್ನು ಕರೆದುಕೊಂಡು ಹೋಗುವವರಾದರೂ ಯಾರು? ಈ ವಿಷಯಗಳಲ್ಲಿ ನನ್ನ ಮಿತ್ರ ವೀರೇಂದ್ರನಾಥ ಬಸು ನನಗೆ ಸಹಾಯ ಮಾಡಿದ.

ಅವನಿಗೆ ಸ್ವಾಮಿ ಬ್ರಹ್ಮಾನಂದರ ಪರಿಚಯವಿತ್ತು. ನಾನು ಸ್ವಾಮಿ ಬ್ರಹ್ಮಾನಂದರನ್ನು ಭೇಟಿಯಾಗಲು ಉತ್ಸುಕನಾಗಿದ್ದ ವಿಷಯ ವೀರೇಂದ್ರನಿಗೆ ಗೊತ್ತಿತ್ತು. ಬಹುಶಃ ೧೯೧೦ನೇ ಇಸವಿ ದುರ್ಗಾ ಪೂಜೆಯ ನಂತರವಿರಬೇಕು, ಒಂದು ದಿನ ವೀರೇಂದ್ರ ನನಗೆ ಪತ್ರ ಬರೆದು, ತಾನು ಕಲ್ಕತ್ತೆಗೆ ಹೋಗುವುದಾಗಿಯೂ, ನಾನು ಅವನೊಂದಿಗೆ ಹೋಗುವುದಾಗಿದ್ದರೆ ಅವನು ನನ್ನನ್ನು ಕರೆದುಕೊಂಡು ಹೋಗಬಲ್ಲ ಎಂಬುದಾಗಿಯೂ ತಿಳಿಸಿದ್ದ. ಕಲ್ಕತ್ತದಿಂದ ಬೇಲೂರು ಮಠಕ್ಕೆ ನನ್ನನ್ನು ಕರೆದುಕೊಂಡು ಹೋಗಿ, ಸ್ವಾಮಿ ಬ್ರಹ್ಮಾನಂದರ ಭೇಟಿ ಮಾಡಿಸಬಹುದು ಎಂದು ಆ ಪತ್ರದಲ್ಲಿ ಬರೆದಿದ್ದನು. ಆ ಪತ್ರ ನನ್ನ ಕೈಸೇರಿದ ಕೂಡಲೇ ನಾನು ಢಾಕಾದಲ್ಲಿದ್ದ ಅವನ ಮನೆಗೆ ಹೋದೆ. ಮರುದಿನ ನಾವಿಬ್ಬರೂ ಕಲ್ಕತ್ತೆಗೆ ಪ್ರಯಾಣ ಬೆಳೆಸಿದೆವು. ಕಲ್ಕತ್ತಾದಲ್ಲಿ ಸಿಯಾಲ್ದಾ ರೈಲ್ವೇ ಸ್ಟೇಷನ್ನಿನ್ನಲ್ಲಿ ಇಳಿದ ನಂತರ ನನ್ನ ಸ್ನೇಹಿತ ನನ್ನನ್ನು ಬೇಲೂರು ಮಠಕ್ಕೆ ಕರೆದುಕೊಂಡು ಹೋದ. ಸ್ಟೀಮರ್‌ನಲ್ಲಿ ಗಂಗೆಯನ್ನು ದಾಟಿ, ಸಾಲ್ಕಿಯಾ (ಒಂದು ಪ್ರದೇಶ) ಮೂಲಕ ನಾವು ಕಾಲುನಡಿಗೆಯಲ್ಲಿ ಬೇಲೂರು ಮಠ ತಲುಪಿದೆವು.

ಬೇಲೂರು ಮಠದಲ್ಲಿ ಮೊದಲಿಗೆ ಸ್ವಾಮಿ ಬ್ರಹ್ಮಾನಂದರ ದರ್ಶನವೇ ಆಯಿತು. ಅವರು ಒಂದು ಆರಾಮ ಖುರ್ಚಿಯಲ್ಲಿ ಕುಳಿತು, ಒಂದು ಗುಡಗುಡಿಯ ಮೂಲಕ ತಂಬಾಕು ಸೇವಿಸುತ್ತಿದ್ದರು. ನಾವು ಅವರಿಗೆ ಪ್ರಣಾಮ ಮಾಡಿದೆವು. ವೀರೇಂದ್ರ ನನ್ನನ್ನು ಪರಿಚಯ ಮಾಡಿಕೊಡುತ್ತ ಹೇಳಿದ, ''ಅನೇಕ ದಿನಗಳಿಂದ ಈ ನನ್ನ ಸ್ನೇಹಿತ ನಿಮ್ಮನ್ನು ಭೇಟಿಮಾಡಬೇಕು ಎಂದು ಹಂಬಲಿಸುತ್ತಿದ್ದ. ಅವನಿಗೆ ನಿಮ್ಮಲ್ಲಿ ಏನೋ ಮಾತನಾಡುವುದಿದೆ.'' ಅದರೊಂದಿಗೆ, ನಾನು ಕೆಲವು ದಿನಗಳ ಮಟ್ಟಿಗೆ ಬೇಲೂರು ಮಠದಲ್ಲಿ ತಂಗಬಹುದೇ ಎಂದು ಅವನು ಕೇಳಿದ. ಅದಕ್ಕೆ ಮಹಾರಾಜರು ಸಮ್ಮತಿಸಿದರು. ವೀರೇಂದ್ರ ಕಲ್ಕತ್ತೆಗೆ ಮರಳಿದ. ಕೆಲವು ದಿನಗಳ

ನಂತರ ಅವನೊಂದಿಗೆ ಢಾಕಾಗೆ ಹಿಂದಿರುವುದಾಗಿಯೂ, ಅಲ್ಲಿಯ ತನಕ ಬೇಲೂರು ಮಠದಲ್ಲಿಯೇ ನಾನು ಇರಬೇಕೆಂದೂ ಆಗ ನಿಶ್ಚಯವಾಯಿತು.

ಬೇಲೂರು ಮಠದಲ್ಲಿ ನನಗೆ ತಂಗಲು ವ್ಯವಸ್ಥೆಯಾಯಿತು, ಅಂತೆಯೇ ಪ್ರತಿನಿತ್ಯ ಸರಿಯಾದ ಸಮಯಕ್ಕೆ ಊಟಕ್ಕೂ ವ್ಯವಸ್ಥೆ ಯಾಯಿತು. ಅದರೊಂದಿಗೆ ರಾಜಾ ಮಹಾರಾಜ್ ನನಗೆ ತಿಳಿಯ ಹೇಳಿದರು — ಶ್ರೀರಾಮಕೃಷ್ಣರ ಕ್ಷೇತ್ರದಲ್ಲಿ ಏನಾದರೂ ಸೇವೆ ಮಾಡದೆ ಊಟ ಮಾಡುವುದು ಸರಿಯಲ್ಲವೆಂದು. ಬಾಬುರಾಮ್ ಮಹಾರಾಜರು (ಸ್ವಾಮಿ ಪ್ರೇಮಾನಂದರು) ನನಗೆ ಪ್ರತಿದಿನ ಏನು ಕೆಲಸ ನೀಡುವರೋ ಅದನ್ನು ಮಾಡಿದ ಬಳಿಕವಷ್ಟೇ ನಾನು ಪ್ರಸಾದ (ಊಟ) ಸ್ವೀಕಾರ ಮಾಡಬೇಕು — ಹೀಗೆಂದು ನಿಶ್ಚಯವಾಯಿತು. ಸ್ವಾಮಿ ಬ್ರಹ್ಮಾನಂದರು ಹೇಳಿದ ವಿಚಾರ ನನ್ನ ಮನಸ್ಸಿನಲ್ಲಿ ನಾಟಿ ನಿಂತಿತ್ತು; ನಾನು ಬಾಬುರಾಮ್ ಮಹಾರಾಜರ ನಿರ್ದೇಶನದಂತೆ ಪ್ರತಿದಿನವೂ ಏನಾದರೂ ಕೆಲಸಮಾಡುತ್ತಿದ್ದೆ. ರಾಜಾ ಮಹಾರಾಜರು ನನಗೆ ಹೀಗೆ ಹೇಳಿದ್ದರು — ''ಪ್ರತಿದಿನ ನೀನು ನನ್ನೊಂದಿಗೆ ಸ್ವಲ್ಪ ಹೊತ್ತು ತಿರುಗಾಡಬೇಕು.'' ಬೇಲೂರು ಮಠದ ಸಾಧುಗಳ ನಿವಾಸ ದಿಂದ ಸ್ವಾಮೀಜಿ ಸಮಾಧಿ ಮಂದಿರದವರೆಗೂ ಅವರು ನಡೆದಾಡು ತ್ತಿದ್ದರು. ಆಗ ಸ್ವಾಮೀಜಿಯವರ ಮಂದಿರದ ಕೆಳಭಾಗವಷ್ಟೇ ನಿರ್ಮಾಣಗೊಂಡಿತ್ತು. ಮೇಲ್ಭಾಗವಿನ್ನೂ ನಿರ್ಮಿತವಾಗಿರಲಿಲ್ಲ. ನಾವು ನಡೆದಾಡುತ್ತಿದ್ದಾಗ ಹಲವು ಮಾತುಕತೆ ನಡೆಸುತ್ತಿದ್ದೆವು. ನನ್ನ ಮನಸ್ಸಿನಲ್ಲಿ ಅನೇಕ ಪ್ರಶ್ನೆಗಳು ಏಳುತ್ತಿದ್ದವು : ಸಾಧು ಜೀವನದ ಬಗ್ಗೆ ಇತ್ಯಾದಿ. ಆದರೆ ಆಗ ನನ್ನ ಮನಸ್ಸಿನಲ್ಲಿ ಎಲ್ಲಕ್ಕಿಂತ ಮುಖ್ಯವಾಗಿ ಎದ್ದು ನಿಲ್ಲುತ್ತಿದ್ದ ಪ್ರಶ್ನೆಯೆಂದರೆ, ಕ್ರಾಂತಿಕಾರಿ ನೀತಿ, ನಿಯಮ ಗಳನ್ನು ಕುರಿತು. ಅದೊಂದು ಬಗೆಯ ಯಾತನೆಯೆನಿಸುತ್ತಿತ್ತು. ಒಂದು ದಿನ ರಾಜಾ ಮಹಾರಾಜರಿಗೆ ಅದೆಲ್ಲವನ್ನೂ ಬಿಡಿಸಿ ಹೇಳಿ, ಅವರ ಅಭಿಪ್ರಾಯವನ್ನು ತಿಳಿಯಬಯಸಿದೆ. ಅದನ್ನು ಕುರಿತು ಸ್ವಾಮಿ ಬ್ರಹ್ಮಾನಂದರು ಹೇಳಿದ ಮಾತು ನನ್ನ ಮನಸ್ಸಿನಲ್ಲಿ ಗಾಢ ವಾದ ಮುದ್ರೆಯನ್ನೊತ್ತಿಬಿಟ್ಟಿತು. ಅವರ ಸ್ನೇಹಪೂರಿತವಾದ ಮಾತುಕತೆಗಳು ನನಗೆ ತುಂಬ ಹಿಡಿಸುತ್ತಿತ್ತು.

ಏಳು ದಿನವಾಯಿತು, ವೀರೇಂದ್ರನ ಸುಳಿವಿಲ್ಲ. ಅವನ ಬಗ್ಗೆ ಯಾವುದೇ ಸುದ್ದಿ ಕೂಡ ಸಿಗಲಿಲ್ಲ. ಕೆಲವು ದಿನಗಳ ನಂತರ ಒಂದು ಪತ್ರ ಬಂತು. ಅದರಲ್ಲಿ ವೀರೇಂದ್ರ ಬರೆದಿದ್ದ, ಏನೋ ಅನಿವಾರ್ಯ ಕಾರಣಗಳಿಂದಾಗಿ ಅವನು ವರ್ಧಮಾನಕ್ಕೆ ಹೋಗಬೇಕಾಗಿ ಬಂತು; ಅಲ್ಲಿಂದ ಕಲ್ಕತ್ತೆಗೆ ಹಿಂದಿರುಗಿ, ತತ್‌ಕ್ಷಣವೇ ಢಾಕಾಗೆ ಹಿಂದಿರುಗ ಬೇಕಾಯಿತು. ಆದ್ದರಿಂದ ನನ್ನನ್ನು ಭೇಟಿಯಾಗಲು ಸಾಧ್ಯವಾಗಲಿಲ್ಲ ಎಂದು. ನನ್ನೊಂದಿಗೆ ಭೇಟಿಯಾಗದೆ ಹೋದದಕ್ಕೆ ವಿಷಾದ ವ್ಯಕ್ತ ಪಡಿಸುತ್ತ, ಸಮಯಾವಕಾಶ ಸಿಕ್ಕಿದಾಗ ನಾನೊಬ್ಬನೇ ಢಾಕಾಗೆ ಹಿಂದಿ ರುಗಬೇಕೆಂದು ಅವನು ಬರೆದಿದ್ದ. ಆ ಪತ್ರವನ್ನು ನಾನು ಸ್ವಾಮಿ ಬ್ರಹ್ಮಾನಂದರಿಗೆ ತೋರಿಸಿದೆ. ಅವರು ಅದನ್ನೋದಿ ಹೇಳಿದರು, ''ಸರಿ ಮತ್ತೆ. ಅವನಂತೂ ಹೊರಟುಹೋದ. ಹೋಗಲಿ ಬಿಡು, ನಿನ್ನ ಒಬ್ಬ ಸ್ನೇಹಿತ ಹೋದನಷ್ಟೆ. ನಾವು ಅನೇಕ ಸ್ನೇಹಿತರು ಇದ್ದೇವಲ್ಲ?'' ಆಗಾಗ ಅವರು ಹೇಳುತ್ತಿದ್ದರು, ''ವೀರೇಂದ್ರ ಒಬ್ಬನೇ ನಿನ್ನ ಸ್ನೇಹಿತನೇನು? ನಾವೆಲ್ಲ ನಿನ್ನ ಸ್ನೇಹಿತರಾಗಬಾರದೆ?'' ಅಂತ.

ಆದರೂ ನನಗೆ ಮರಳಿ ಹೋಗಬೇಕೆನಿಸುತ್ತಿತ್ತು. ಇದನ್ನು ನಾನು ರಾಜಾ ಮಹಾರಾಜರಿಗೆ ತಿಳಿಸಿದೆ. ಅವರೆಂದರು, ''ಈಗಲೇ ಯಾಕೆ ಹೋಗಬಯಸುತ್ತೀಯಾ? ಇನ್ನೊಂದು ತಿಂಗಳು ಇಲ್ಲಿರು. ಸ್ವಾಮೀಜಿ ಜಯಂತಿ ಹತ್ತಿರ ಬರುತ್ತಿದೆ; ಅಲ್ಲಿಯತನಕ ಇದ್ದು ಹೋಗು.'' ಆಗ ನನಗೆ ಮರಳಿ ಹೋಗುವ ಬಯಕೆ ತೀವ್ರವಾಗಿತ್ತು. ಏನೇ ಇರಲಿ, ಸ್ವಾಮಿ ಬ್ರಹ್ಮಾನಂದರು ಹೇಳುತ್ತಿದ್ದಾರೆ ಅಂತ ಸ್ವಾಮೀಜಿ ಜಯಂತಿ ಉತ್ಸವದವರೆಗೆ ಅಲ್ಲಿರೋಣ ಎಂದು ಭಾವಿಸಿದೆ. ಸ್ವಾಮೀಜಿ ಜಯಂ ತಿಯ ಸಂದರ್ಭದಲ್ಲಿ ನನಗೆ ಬಹಳ ಆನಂದವುಂಟಾಯಿತು. ರಾಜಾ ಮಹಾರಾಜರಿಗೆ ಅದನ್ನು ತಿಳಿಸಿದಾಗ ಅವರೆಂದರು, ''ನೀನು ಹೋಗಿಬಿಟ್ಟಿದ್ದರೆ ನಿನಗೆ ಈ ಆನಂದ ಎಲ್ಲಿ ಸಿಗುತ್ತಿತ್ತು?''

ಸ್ವಾಮೀಜಿ ಜಯಂತಿ ಮುಕ್ತಾಯಗೊಂಡಾಗ ಮತ್ತೆ ಊರಿಗೆ ಮರಳುವ ವಿಷಯವನ್ನು ಪ್ರಸ್ತಾಪಿಸಿದೆ. ರಾಜಾ ಮಹಾರಾಜ್ ಆಗ ಶ್ರೀರಾಮಕೃಷ್ಣರ ಜಯಂತಿಯವರೆಗೆ ಇದ್ದು ಹೋಗಲು ಹೇಳಿದರು. ಶ್ರೀರಾಮಕೃಷ್ಣರ ಜಯಂತಿ ಇನ್ನೊಂದು ಆನಂದದ ಸಂದರ್ಭ ವಾಗಿತ್ತು. ಈ ಆನಂದಕ್ಕೆ ಎಣೆಯಿಲ್ಲ ಎಂದು ನಾನು ಭಾವಿಸಿದೆ. ಉತ್ಸವ, ಆನಂದಗಳೆಲ್ಲ ಮುಗಿದ ಮೇಲೆ ನಾನು ಗಮನಿಸಿದೆ — ಮರಳಿ ಹೋಗುವ ಬಯಕೆ ನನ್ನಲ್ಲಿ ಇನ್ನು ಉಳಿದಿಲ್ಲವೆಂದು. ನನ್ನ ಮನಸ್ಸಿನ ಒಳಗೆ ಆಗ ಒಂದು ಹೊಸ ಲೋಕ ತೆರೆದಂತಾಗಿತ್ತು. ಅದು ನನಗೆ ಅತ್ಯಂತ ಆತ್ಮೀಯವಾದ ಲೋಕ ಎಂದು ನನಗೆ ಅನುಭವಕ್ಕೆ ಬಂತು. ರಾಜಾ ಮಹಾರಾಜರಿಗೆ ಇನ್ನು ಹೇಳಬೇಕಾಗಿ ಬರಲಿಲ್ಲ ; ನನ್ನ ಒಳಗಿನ ಬಯಕೆಯಿಂದಲೇ ನಾನು ಬೇಲೂರು ಮಠದಲ್ಲಿ ಉಳಿದುಬಿಟ್ಟೆ. ನಿಜವಾಗಿಯೂ ಅವರ ಆಶೀರ್ವಾದದಿಂದಲೇ ಇದು ಸಾಧ್ಯವಾಗಿತ್ತು.

ನನ್ನ ಸಾಧು ಜೀವನದ ಮೊದಲ ಹಂತದಲ್ಲಿ ಸ್ವಾಮಿ ಬ್ರಹ್ಮಾ ನಂದರಲ್ಲದೆ ವಿಶೇಷ ಪ್ರಭಾವ ಬೀರಿದವರೆಂದರೆ ಪೂಜ್ಯ ಬಾಬು


ಸ್ವಾಮಿ ಪ್ರೇಮಾನಂದರು

ರಾಮ್ ಮಹಾರಾಜರು (ಸ್ವಾಮಿ ಪ್ರೇಮಾನಂದರು). ಇಂದು ನಾನು ಅವರನ್ನು ಶ್ರದ್ಧೆಯಿಂದ ನೆನಪಿಸಿಕೊಳ್ಳುತ್ತಿದ್ದೇನೆ. ಅಷ್ಟೊಂದು ಸ್ನೇಹಶೀಲವಾದ, ಬಡವರಲ್ಲಿ ಕರುಣೆ ತೋರಿಸುವ, ವಿಶೇಷತಃ ಕರ್ಮಯೋಗಿಗಳಾದ ಸಾಧುಗಳನ್ನು ನಾನು ಬೇರೆ ನೋಡಿಲ್ಲ. ಬಾಬುರಾಮ್ ಮಹಾರಾಜರ ಶುಭೇಚ್ಛೆ ಹಾಗೂ ಪ್ರೇರಣೆಯಿಂದಲೇ ನಾನು ಶ್ರೀಮಾತೆಯವರ ಕೃಪೆಗೆ ಪಾತ್ರನಾಗುವಂತಾಯಿತು.

* * *

ದಿನಾಂಕ ನೆನಪಿಲ್ಲ; ಒಂದು ದಿನ ಬಾಬುರಾಮ್ ಮಹಾರಾಜರ ಸೂಚನೆಯಂತೆ ಬೇಲೂರು ಮಠದಿಂದ ಕಲ್ಕತ್ತೆಗೆ ಹೋದೆ. ಬಾಬುರಾಮ್ ಮಹಾರಾಜ್ ಅಂದು ಬಲರಾಮ ಬಸುವಿನ ಮನೆಯಲ್ಲಿ ತಂಗುವುದಾಗಿ ತಿಳಿಸಿದ್ದರು. ಅಂದು ರಾತ್ರಿ ನಾನೂ ಅಲ್ಲಿಗೆ ಹೋಗಬೇಕೆಂದು ಅವರು ಹೇಳಿದ್ದರು. ನಾನು ಸಾಯಂಕಾಲದ ಹೊತ್ತಿಗೇ ಅಲ್ಲಿಗೆ ಹೋಗಿ ತಲುಪಿದೆ. ಆಗ ಪರಿಸ್ಥಿತಿ ಹೇಗಿತ್ತೆಂದರೆ, ಕಲ್ಕತ್ತೆಯಲ್ಲಿ ಆಗ ಬಲರಾಮ ಬಸುವಿನ ಮನೆ ಬಿಟ್ಟರೆ ಬೇರೆಲ್ಲೂ ತಂಗಲು ಸ್ಥಳ ವಿರಲಿಲ್ಲ. ಸಾಧುಗಳ ಆವಾಸಸ್ಥಾನವೆಂದರೆ ಬಲರಾಮನ ಮನೆಯೇ ಆಗಿತ್ತು. ಅಲ್ಲಿಗೆ ಹೋಗಿ ನಿಶ್ಚಿಂತೆಯಿಂದ ಇರಬಹುದಾಗಿತ್ತು; ಹಾಗೂ ಊಟೋಪಚಾರಗಳನ್ನು ಮಾಡಬಹುದಾಗಿತ್ತು. ಇನ್ನು ಆರೋಗ್ಯ ಕೆಟ್ಟಿತೆಂದರೆ ಅಲ್ಲಿಗೆ ಹೋಗಿ ಇದ್ದುಬಿಡಲು ಹೇಳುತ್ತಿದ್ದರು. ಬಲರಾಮನ ಕುಟುಂಬದವರೆಲ್ಲ ಸಾಧುಗಳನ್ನು ತುಂಬ ಆದರದಿಂದ ನೋಡಿಕೊಳ್ಳುತ್ತಿದ್ದರು. ಅಂದು ಸಂಜೆ ಒಬ್ಬ ನೀಳಕಾಯದ ಹುಡುಗ ಅಲ್ಲಿಗೆ ಬಂದಿದ್ದನ್ನು ಗಮನಿಸಿದೆ. ಅವನು ಬಾಬುರಾಮ್ ಮಹಾರಾಜರ ಪರಿಚಿತನಿರಬೇಕು ಅನ್ನಿಸಿತು. ಆದರೆ ನನಗೆ ಅವನ ಪರಿಚಯ ಅಷ್ಟಾಗಿ ಇದ್ದಂತಿಲ್ಲ. ಬಾಬುರಾಮ್ ಮಹಾರಾಜ್ ನನಗೆ ಹೇಳಿದರು, ''ನೋಡು, ಇಂದು ಇಲ್ಲಿಗೆ ಬಂದಿರುವಾಗ ನಿನ್ನಿಂದ ಒಂದು ಕೆಲಸವಾಗಬೇಕಿದೆ. ಈ ಹುಡುಗನಿಗೆ ಕಲ್ಕತ್ತಾ ಪೇಟೆ ಏನೇನೂ ಗೊತ್ತಿಲ್ಲ. ನಾಳೆ ಅವನು ಶ್ರೀಮಾತೆಯವರಿಂದ ದೀಕ್ಷೆ ಬೇರೆ ಪಡೆಯಲಿದ್ದಾನೆ. ನಾಳೆ ಬೆಳಿಗ್ಗೆ ನೀನು ಅವನನ್ನು ಕರೆದುಕೊಂಡು ಹೋಗಬೇಕು. ಮೊದಲು ನೀನು 'ಉದ್ಬೋಧನ'ದ ಬಳಿ ಗಂಗೆಯ ಸ್ನಾನಘಟ್ಟವಿದೆಯಲ್ಲ, ಅಲ್ಲಿಗೆ ಹೋಗಿ ಸ್ನಾನ ಮಾಡಬೇಕು; ಅವನಿಗೂ ಮಾಡಿಸಬೇಕು. ಅನಂತರ 'ಉದ್ಬೋಧನ'ಕ್ಕೆ ಹೋಗಿ ಶರತ್ ಮಹಾರಾಜರನ್ನು ಕಂಡು, ಅವರ ಬಳಿ ಇವನ ದೀಕ್ಷೆಯ ವಿಚಾರ ಹೇಳು. ಮಾಡಬಲ್ಲೆ ತಾನೆ?'' ಎಂದರು. ''ಆಗಲಿ ಮಹಾರಾಜ್, ಯಾಕೆ ಮಾಡಲಾರೆ?'' ಎಂದೆ ನಾನು.

ಸಮಯಕ್ಕೆ ಸರಿಯಾಗಿ ಮಲಗಿ ನಿದ್ದೆ ಮಾಡಿದೆ. ಬೆಳಿಗ್ಗೆ ಇನ್ನೂ ನಸುಕು ಕತ್ತಲಾಗಿರುವಾಗಲೇ ಬಾಬುರಾಮ್ ಮಹಾರಾಜ್ ಎದ್ದು, ಕರೆದು ಎಬ್ಬಿಸತೊಡಗಿದರು: ''ಬೀರೇನ್, ಎದ್ದೇಳು. ಬೇಗನೆ ಹೊರಡಬೇಕಲ್ಲ?'' ಆ ಹುಡುಗನ ಹೆಸರು ಬೀರೇನ್ ಅಂತ. ಅನಂತರ ನನ್ನನ್ನೂ ಕರೆದರು — ''ಎದ್ದೇಳು, ಕೈಕಾಲು ಮುಖ ತೊಳೆ.'' ನಾನು ಎದ್ದು, ಮುಖ ತೊಳೆದು ಹೊರಟು ನಿಂತೆ. ಮೆಟ್ಟಿಲಲ್ಲಿ ಇನ್ನೂ ಕತ್ತಲಿತ್ತು. ಮೆಟ್ಟಿಲಿಳಿದು ಬರುವಾಗ ಬಾಬುರಾಮ್ ಮಹಾರಾಜ್ ನನಗೆ ಹೇಳಿದರು, ''ಕೇಳು, ಸ್ವಲ್ಪ ನಿಲ್ಲು. ಅಲ್ಲ , ನಿನಗೆ ಮಂತ್ರದೀಕ್ಷೆ ಆಗಿದೆಯೆ? ನೀನೂ ದೀಕ್ಷೆ ಪಡೆದುಕೋ. ರಾಜಾ ಮಹಾರಾಜರೊಂದಿಗೆ ನಾನು ಈ ವಿಷಯವಾಗಿ ಮಾತನಾಡಿದೆ ಎಂದು ನನ್ನ ನೆನಪು. ನಿನ್ನ ದೀಕ್ಷೆಯ ವಿಷಯವಾಗಿ ಅವರು ಹೇಳಿದ್ದಾರೆ.'' ತುಸು ತಡೆದು ಅವರು ಹೇಳಿದರು, ''ನನ್ನ ಮಾತು ಕೇಳುತ್ತೀಯಾ? ನನ್ನ ಮಾತು ಒಪ್ಪುತ್ತೀಯಾ?'' ''ಯಾಕೆ ಕೇಳಲಾರೆ? ಹೇಳಿ ಮಹಾರಾಜ್'' ಎಂದು ವಿನಯದಿಂದ ಹೇಳಿದೆ. ಅವರೆಂದರು, ''ಕೇಳು, ನೀನು ಶ್ರೀಮಾತೆಯವರಿಂದ ಮಂತ್ರದೀಕ್ಷೆ ಪಡೆದುಕೋ.'' ನಾನು ಕೇಳಿದೆ, ''ಆದರೆ ಶ್ರೀಮಾತೆಯವರಿಂದ ಹೇಗೆ ದೀಕ್ಷೆ ಪಡೆಯಲಿ? ಅವರಿಗೆ ನನ್ನ ಪರಿಚಯ ಅಷ್ಟಾಗಿ ಇಲ್ಲವಲ್ಲ? ನಾನು ಹೋಗಿ ಪ್ರಣಾಮ ಮಾಡಿ ಬಂದುಬಿಡುತ್ತೇನೆ.'' ಬಾಬುರಾಮ್ ಮಹಾರಾಜ್, ''ಇಲ್ಲ , ಅವರಿಗೆ ನಿನ್ನ ಪರಿಚಯವಿದೆ.'' ''ಹಾಗಿದ್ದರೆ ನಾನು ಅವರನ್ನು ಏನು ಕೇಳಲಿ?'' ಎಂದು ಕೇಳಿದೆ. ಅದಕ್ಕೆ ಅವರು, ''ನೀನು ಶರತ್ ಮಹಾರಾಜ್ ಬಳಿ ಹೋಗಿ ಅವರನ್ನು ಕೇಳು. ಶಾರದಾನಂದ ಮಹಾರಾಜರಿಗೆ ನಿನ್ನ ಪರಿಚಯವಿದೆ ತಾನೆ?'' ಎಂದರು. ''ಹೌದು ಮಹಾರಾಜ್, ಅವರಿಗೆ ನನ್ನ ಪರಿಚಯವಿದೆ'' ಎಂದೆ. ''ಪೂಜ್ಯ ಶಶಿ ಮಹಾರಾಜ್ ಅನಾರೋಗ್ಯ ಕಾರಣದಿಂದ 'ಉದ್ಬೋಧನ'ದಲ್ಲಿದ್ದಾಗ ನಾನು ಅಲ್ಲಿದ್ದೆ. ಸ್ವಲ್ಪ ದಿನಗಳ ಕಾಲ ನಾನು ಅವರ ಸೇವೆಯನ್ನೂ ಮಾಡಿದ್ದೆ. ಆಗ ಸ್ವಾಮಿ ಶಾರದಾನಂದರು ನನ್ನನ್ನು ನೋಡಿದ್ದಾರೆ.'' ಬಾಬುರಾಮ್ ಮಹಾರಾಜ್ ಆಗ ಹೇಳಿದರು, ''ಹೌದು. ಶರತ್ ಮಹಾರಾಜರಿಗೆ ನಿನ್ನ ಪರಿಚಯ ಬಹಳ ಚೆನ್ನಾಗಿದೆ. ಅವರಿಗೆ ನಿನ್ನನ್ನು ಕಂಡರೆ ತುಂಬಾ ಇಷ್ಟ. ಒಂದಿಷ್ಟು ದಿನ ಶಶಿ ಮಹಾರಾಜರ ಸೇವೆ ಮಾಡಿದೆಯಲ್ಲ? ಆಗ ನೀನು ಎಷ್ಟೊಂದು ಕಷ್ಟಪಟ್ಟಿದ್ದೆ! ನಿನ್ನನ್ನು ಕುರಿತು ಅವರಿಗೆ ಒಳ್ಳೆಯ ಅಭಿಪ್ರಾಯವಿದೆ.'' ''ಅದು ನನಗೆ ಗೊತ್ತಿಲ್ಲ'' — ನಾನೆಂದೆ. ಆಗ ಅವರೆಂದರು, ''ಇರಲಿ. ಅವನನ್ನು ನಿನ್ನೊಂದಿಗೆ ಕರೆದುಕೊಂಡು ಹೋಗು. ನಿನಗಾಗಿ ಕೂಡ ಒಂದು ಜೊತೆ ಹೊಸ ಬಟ್ಟೆಯನ್ನು ತೆಗೆದುಕೊಂಡು ಹೋಗು. ನೀವಿಬ್ಬರೂ ಗಂಗಾಸ್ನಾನ ಮಾಡಿ, 'ಉದ್ಬೋಧನ'ಕ್ಕೆ ಹೋಗಿ, ಶರತ್ ಮಹಾರಾಜರನ್ನು ಕಂಡು ಅವರಿಗೆ ಹೇಳಿ, 'ಬಾಬುರಾಮ್ ಮಹಾರಾಜರು ನಮ್ಮನ್ನು ಕಳುಹಿಸಿದ್ದಾರೆ. ಅವರು ನಿಮಗೆ ಹೇಳಿದ್ದಾರೆ, ಶ್ರೀಮಾತೆಯವರಿಗೆ ನಮ್ಮ ದೀಕ್ಷೆಯ ಕುರಿತಾಗಿ ನೀವು ಹೇಳಬೇಕು ಹಾಗೂ ಅದಕ್ಕೆ ಬೇಕಾದ ವ್ಯವಸ್ಥೆ ಮಾಡಬೇಕು' ಅಂತ.''

ಸ್ವಾಮಿ ಬ್ರಹ್ಮಾನಂದರ ಬಳಿ ನಾನು ಮಾರ್ಗದರ್ಶನ ಮಾಡಲು ಪ್ರಾರ್ಥಿಸಿಕೊಂಡಿದ್ದೆ. ಆದರೆ ವಿಧಿವತ್ತಾಗಿ ಮಂತ್ರದೀಕ್ಷೆ ಪಡೆ ಯಲು ಪ್ರಾರ್ಥಿಸಿಕೊಂಡಿರಲಿಲ್ಲ , ನಿಜ. ಆದರೂ ಅಧ್ಯಾತ್ಮಿಕ ಜೀವನಕ್ಕೆ ಅಗತ್ಯವಾದ ಉಪದೇಶಗಳನ್ನು ಅವರಿಂದ ಪಡೆಯಲು ಕೇಳಿಕೊಂಡಿದ್ದೆ. ಅದಲ್ಲದೆ, ಬೇಲೂರು ಮಠದಲ್ಲಿ ನಾನು ಮೊದಲು ಪರಿಚಯ ಮಾಡಿಕೊಂಡದ್ದು ಅವರನ್ನೇ. ಆದ್ದರಿಂದ ಅವರಿಂದ ಮಂತ್ರದೀಕ್ಷೆ ಪಡೆಯುವ ಒಂದು ಬಯಕೆ ನನ್ನ ಮನಸ್ಸಿನಲ್ಲಿ ನಿಂತುಬಿಟ್ಟಿತ್ತು. ಆದರೆ ಬಾಬುರಾಮ್ ಮಹಾರಾಜರು ಎಷ್ಟೊಂದು ಬಲವಂತ ಮಾಡಿ ನನಗೆ ಹೇಳಿದ್ದರೆಂದರೆ, ನಾನು ಅವರು ಹೇಳಿದಂತೆ ಮಾಡದೆ ಬೇರೆ ಉಪಾಯವೇ ಇರಲಿಲ್ಲ. ಅವರೆಂದಿದ್ದರು, ''ನಿನಗೆ ನನ್ನಲ್ಲಿ ವಿಶ್ವಾಸವಿಲ್ಲವೆ? ನನ್ನಲ್ಲಿ ನಿನಗೆ ಪ್ರೀತಿಯಿಲ್ಲವೆ? ನೋಡು, ನಿನ್ನ ಒಳ್ಳೆಯದಕ್ಕಾಗಿಯೇ ಹೇಳುತ್ತಿದ್ದೇನೆ, ನೀನು ಶ್ರೀಮಾತೆಯವರಿಂದ ಮಂತ್ರದೀಕ್ಷೆ ಪಡೆದುಕೋ.'' ಅವರು ಹೀಗೆ ಹೇಳಿದ ಮೇಲೆ

ನಾನು ಬೇರೇನು ಹೇಳಲಿ? ಈಗ ಏನು ನಿಶ್ಚಯವಾಗಿದೆಯೋ ಅಂತೆಯೇ ನಾನು ಮಾಡಬೇಕು, ಹಾಗೆ ಮಾಡುವುದೇ ಯುಕ್ತವಾದದ್ದು ಎಂದು ಅರಿತುಕೊಂಡೆ. ಅವರ ಆದೇಶವನ್ನು ಪಾಲಿಸದೆ ಇರುವುದು ನನ್ನ ಪಾಲಿಗೆ ಅಸಾಧ್ಯವಾಗಿತ್ತು.

ಅನಂತರ ಸರಿಯಾದ ವೇಳೆಗೆ ನಾನು 'ಉದ್ಬೋಧನ' ತಲುಪಿ, ಪೂಜ್ಯ ಶರತ್ ಮಹಾರಾಜರಿಗೆ ಎಲ್ಲವನ್ನು ತಿಳಿಸಿದೆ. ಅವರು ಎಲ್ಲ ಕೇಳಿಸಿಕೊಂಡು ಜೊತೆಜೊತೆಗೆ, ''ಹಾಂ, ಆಗಲಿ; ಖಂಡಿತ ಆಗಿಬಿಡುತ್ತದೆ'' ಎನ್ನತೊಡಗಿದರು. ಅವರು ಶ್ರೀಮಾತೆಯವರ ಬಳಿ ನಮ್ಮನ್ನು ಕರೆದುಕೊಂಡು ಹೋಗಿ ಪರಿಚಯ ಮಾಡಿಕೊಟ್ಟರು. ನನ್ನ ಪರಿಚಯ ಮಾಡಿಕೊಡುವ ಸಮಯದಲ್ಲಿ ನಾನು ಶಶಿ ಮಹಾರಾಜರಿಗೆ ಸೇವೆ ಮಾಡಿದ್ದ ವಿಷಯವನ್ನು ಅವರು ಹೇಳಿದರು. ಶ್ರೀಮಾತೆ ಅದೆಲ್ಲವನ್ನೂ ಕೇಳಿಸಿಕೊಂಡು, ''ಆಗಲಿ ಮಗೂ; ನಿನ್ನ ಮಂತ್ರದೀಕ್ಷೆ ನಡೆಯುವುದು. ಹೋಗು ಮಗೂ, ಕೆಳ ಅಂತಸ್ತಿಗೆ ಹೋಗಿ ಕುಳಿತುಕೋ. ಅನಂತರ ಕರೆಯುತ್ತೇನೆ'' ಎಂದರು.

ಸರಿಯಾದ ಸಮಯಕ್ಕೆ ದೀಕ್ಷೆ ಆರಂಭವಾಯಿತು. ನಮ್ಮನ್ನು ಒಬ್ಬೊಬ್ಬರನ್ನಾಗಿ ಕರೆದರು. ಮೊದಲು ನನ್ನೊಂದಿಗೆ ಇದ್ದವನನ್ನು ಕರೆದರು. ಅನಂತರ ನನ್ನನ್ನು ಕರೆದರು. 'ಉದ್ಬೋಧನ'ದಲ್ಲಿ ಈಗ ಶ್ರೀರಾಮಕೃಷ್ಣರ ಪೂಜೆ ನಡೆಯುತ್ತಿರುವ ಕೋಣೆಯಲ್ಲಿ ಆಗ ಶ್ರೀಮಾತೆ ವಾಸಿಸುತ್ತಿದ್ದರು. ಶ್ರೀಮಾತೆಯವರು ಸೆರಗನ್ನು ತಲೆಯ ಮೇಲೆಳೆದುಕೊಂಡು ಯಾವಾಗಲೂ ಮರೆಯಾಗಿರುತ್ತಿದ್ದರು. ಆದರೆ ಇಂದು ಅವರು ಸೆರಗನ್ನು ಎಳೆದುಕೊಂಡಿರಲಿಲ್ಲ. ಆಸನವನ್ನು ಹರಡಲಾಗಿತ್ತು . ಆ ಕೋಣೆಯೊಳಗೆ ಪ್ರವೇಶಿಸಿ, ಹಾಸಿದ್ದ ಆಸನದ ಮೇಲೆ ನಾನು ಕುಳಿತುಕೊಂಡೆ. ಕುಳಿತುಕೊಂಡ ಕೆಲವೇ ಕ್ಷಣಗಳಲ್ಲಿ, ಶ್ರೀಮಾತೆ ನನಗೆ ಕೆಲವು ಪ್ರಶ್ನೆಗಳನ್ನು ಕೇಳಿದರು. ನನಗೆ ನೆನಪಿರುವಂತೆ, ನನ್ನ ಇಷ್ಟದೇವತೆಯನ್ನು ಕುರಿತಂತೆ ಅಥವಾ ಅಂಥದೇ ಇನ್ನೇನೋ ಪ್ರಶ್ನೆಗಳನ್ನು ಅವರು ಕೇಳಿದರು. ನಾನು ಹೇಳಿದ್ದೆ, ''ನನಗೆ ಯಾವುದು ಇಷ್ಟ, ಯಾವುದು ಇಷ್ಟವಿಲ್ಲ ಅಂತ ನನಗೆ ಗೊತ್ತಿಲ್ಲ. ನಿಮಗೆ ಯಾವುದು ಒಳ್ಳೆಯದು ಅನ್ನಿಸುತ್ತದೋ, ಅದನ್ನೇ ನನಗೆ ನೀಡಿ, ಅಮ್ಮಾ.'' ಅದಕ್ಕೆ ಶ್ರೀಮಾತೆ, ''ಅದನ್ನೇ ನೀಡುತ್ತೇನೆ'' ಎಂದರು. ಅನಂತರ ಶ್ರೀಮಾತೆ ಸ್ವಲ್ಪ ಹೊತ್ತು ಧ್ಯಾನಿಸಿದರು, ಬಳಿಕ ನನಗೆ ಮಂತ್ರದೀಕ್ಷೆ ನೀಡಿದರು. ನಾನು ಸ್ತಂಭೀಭೂತನಾದೆ. ಅಲ್ಲಿಯತನಕ ನಾನು ಯಾವ ಭಾವವನ್ನು ಹೊಂದಿದ್ದೆನೋ, ಆ ಭಾವಕ್ಕೆ ಅನುಗುಣವಾದ ಮಂತ್ರವನ್ನೇ ಅವರು ಕೊಟ್ಟುಬಿಟ್ಟಿದ್ದರು! ನಾನಂತೂ ನನಗೆ ಇಷ್ಟವಾಗುವ, ಇಷ್ಟವಿಲ್ಲದ ಸಂಗತಿ ಯಾವುದು ಅಂತ ಶ್ರೀಮಾತೆಯವರಿಗೆ ಏನನ್ನೂ ಹೇಳಿರಲಿಲ್ಲ. ತಮಗೆ ಇಷ್ಟವಾದ ರೀತಿಯಲ್ಲಿ ಮಂತ್ರವನ್ನು ನೀಡಲು ನಾನು ಬೇಡಿಕೊಂಡಿದ್ದೆ. ನನ್ನ ಇಷ್ಟವಾದರೋ ಯಾವ ಬಗೆಯದಾದರೂ ಆಗಬಹುದಾಗಿತ್ತು. ಆದರೆ ಅದೆಂಥ ಆಶ್ಚರ್ಯ! ಅಷ್ಟರವರೆಗೆ ಯಾವ ಭಾವವನ್ನು ಹೊತ್ತು ಸಾಧನೆ ಮಾಡುತ್ತಿದ್ದೆನೋ, ಆ ಭಾವಕ್ಕೆ ಅನುಗುಣವಾದ ಮಂತ್ರವನ್ನೇ ಶ್ರೀಮಾತೆ ಕೊಟ್ಟುಬಿಟ್ಟಿದ್ದರು! ಶ್ರೀಮಾತೆ ತಮ್ಮ ದಿವ್ಯ ದೃಷ್ಟಿಯಿಂದ ನನ್ನ ಮನಸ್ಸನ್ನು ಅರಿತುಕೊಂಡುಬಿಟ್ಟಿದ್ದರು. ಇದರಿಂದ ನನ್ನ ಮನಸ್ಸಿಗೆ ಅತೀವ ತೃಪ್ತಿ ಹಾಗೂ ಆನಂದ ಉಂಟಾಯಿತು. ನನ್ನ ಮಂತ್ರದೀಕ್ಷೆ ಹೀಗೆ ನಡೆಯಿತು.

ದೀಕ್ಷೆಯ ನಂತರ ನಾನು ಬೇಲೂರು ಮಠದಲ್ಲೇ ಇದ್ದೆ. ಗಂಗಾನದಿಯ ಈ ತೀರದಲ್ಲಿ ನಾವೆಲ್ಲ ಇದ್ದೆವು; ಆ ತೀರದಲ್ಲಿ ಶ್ರೀಮಾತೆ ತಮ್ಮ ಲೀಲಾ ಸಹಚರರೊಂದಿಗೆ ಇದ್ದರು. ಇಂದಿನಂತೆ ಆಗ ಇಷ್ಟ ಬಂದಾಗಲೆಲ್ಲ ಬೇಲೂರು ಮಠದಿಂದ ಹೊರಗೆ ಹೋಗಿ ಬರುವುದು ಸಾಧ್ಯವಿರುತ್ತಿರಲಿಲ್ಲ. ಅಲ್ಲದೆ, ಬೇಲೂರು ಮಠಕ್ಕೆ ಸ್ವಂತ ವಾಹನವೂ ಇರಲಿಲ್ಲ. ಆದ್ದರಿಂದ ನಮಗೆ ಇಷ್ಟವಿದ್ದರೂ ಶ್ರೀಮಾತೆಯವರ ದರ್ಶನ ಮಾಡಿ ಬರುವುದು ಆಗ ಸಾಧ್ಯವಿರಲಿಲ್ಲ. ಆದರೂ ಬಾಬುರಾಮ್ ಮಹಾರಾಜರು ಎಂದಾದರೂ ನಮ್ಮನ್ನು ಕಾರ್ಯ ನಿಮಿತ್ತ ಕಲ್ಕತ್ತೆಗೆ ಕಳುಹಿಸುವಾಗ, '' 'ಉದ್ಬೋಧನ'ದಲ್ಲಿ ಪ್ರಸಾದ (ಎಂದರೆ ಊಟ) ಸ್ವೀಕರಿಸಿ, ಶ್ರೀಮಾತೆಯವರಿಗೆ ಪ್ರಣಾಮ ಮಾಡಿ ಬನ್ನಿ'' ಎನ್ನುತ್ತಿದ್ದರು.

ಶ್ರೀಮಾತೆಯವರಿಗೆ ಪ್ರಣಾಮ ಮಾಡುವುದು ಒಂದು ಸಮಸ್ಯೆಯೇ. ಯಾವಾಗಲೂ ಅವರ ಸುತ್ತ ಮಹಿಳೆಯರು ನೆರೆದಿರುತ್ತಿದ್ದರು. ಆದ್ದರಿಂದ, ದರ್ಶನ ಮಾಡುವುದಿದ್ದರೆ ಮೊದಲು ಶರತ್ ಮಹಾರಾಜರಿಗೆ ತಿಳಿಸಬೇಕು; ಅವರು ಅದನ್ನು ರಾಸಬಿಹಾರಿ ಮಹಾರಾಜರಿಗೆ (ಸ್ವಾಮಿ ಅರೂಪಾನಂದರು) ಹೇಳುತ್ತಿದ್ದರು; ರಾಸಬಿಹಾರಿ ಮಹಾರಾಜರು ಭಕ್ತರನ್ನು ಶ್ರೀಮಾತೆಯವರ ಬಳಿಗೆ ಕರೆದುಕೊಂಡು ಹೋಗುತ್ತಿದ್ದರು. ಇದು ನಿಯಮ. ಶ್ರೀಮಾತೆ ಹಾಗೂ ಅವರ ಭಕ್ತೆಯರಿಗೆ ತುಸು ಅನನುಕೂಲವಾದೀತು ಎಂಬ ಭಾವನೆಯಿಂದ ಅವರ ದರ್ಶನದ ಬಗ್ಗೆ ಕೇಳಲು ನನಗೆ ಅಳುಕು ಉಂಟಾಗುತ್ತಿತ್ತು. ಏನೇ ಇರಲಿ, ಬಾಬುರಾಮ್ ಮಹಾರಾಜರ ಸೂಚನೆಯಂತೆ ಶರತ್ ಮಹಾರಾಜರ ಬಳಿಗೆ ಹೋಗಿ ಶ್ರೀಮಾತೆಯವರ ದರ್ಶನ ಪಡೆಯಲು ಪ್ರಾರ್ಥಿಸಿಕೊಳ್ಳುತ್ತಿದ್ದೆ. ಅದಕ್ಕೆ ತಾನಾಗಿ ವ್ಯವಸ್ಥೆಯಾಗುತ್ತಿತ್ತು. ಶ್ರೀಮಾತೆಯವರ ಕೋಣೆಗೆ ಹೋಗಿ ನೋಡಿದರೆ, ಅವರು ಸುದೀರ್ಘವಾದ ಸೆರಗಿನಿಂದ ಮುಖವನ್ನು ಮುಚ್ಚಿಕೊಂಡು ಕುಳಿತಿರುತ್ತಿದ್ದರು. ಬೇಲೂರು ಮಠದಿಂದ ಬಂದಿದ್ದೇನೆ ಎಂಬುದನ್ನು ಕೇಳಿದಾಗ, ಅವರು ಮುಖದ ಮೇಲಿದ್ದ ಸೆರಗನ್ನು ಸ್ವಲ್ಪ ಸರಿಸಿ ಕೇಳುತ್ತಿದ್ದರು: ''ಮಗೂ, ಬೇಲೂರು ಮಠದಲ್ಲೇನು ವಿಶೇಷ? ಬಾಬುರಾಮ ಹೇಗಿದ್ದಾನೆ? ತಾರಕ (ಸ್ವಾಮಿ ಶಿವಾನಂದರು) ಹೇಗಿದ್ದಾನೆ?'' ಅನಂತರ ವಿವರವಾಗಿ ಪ್ರತಿಯೊಬ್ಬರ ಕ್ಷೇಮ ಸಮಾಚಾರವನ್ನು ಕೇಳಿ ತಿಳಿಯುತ್ತಿದ್ದರು. ಕೆಲಸಗಾರರ ವಿಷಯವನ್ನೂ ವಿಚಾರಿಸುತ್ತಿದ್ದರು. ಶ್ರೀಮಾತೆಯವರಿಗೆ ಎಲ್ಲವನ್ನೂ ತಿಳಿಸಬೇಕಾಗಿತ್ತು. ಆದರೆ ಇಂಥ ದರ್ಶನಗಳ ಅವಕಾಶ ದೊರೆಯುತ್ತಿದ್ದುದು ಏನಾದರೂ ಕೆಲಸಕಾರ್ಯಗಳು ಇದ್ದಾಗ ಮಾತ್ರ. ಇಂಥ ಅವಕಾಶಗಳಾದರೂ ಯಾವಾಗಲೋ ಒಮ್ಮೊಮ್ಮೆ ಮಾತ್ರ ಲಭಿಸುತ್ತಿತ್ತು. ಶ್ರೀಮಾತೆಯವರ ಸಾನ್ನಿಧ್ಯ ಹೆಚ್ಚು ದೊರಕುವುದಾಗಲಿ, ಅವರ ಬಂಧುಬಳಗದೊಂದಿಗೆ ಕೆಲವು ದಿನಗಳನ್ನು ಕಳೆಯುವ ಸುಯೋಗವಾಗಲಿ ನಮಗೆ ಎಂದೂ ಲಭಿಸಲಿಲ್ಲ.

ದುರ್ಗಾಪೂಜೆಯ ಸಂದರ್ಭದಲ್ಲಿ ಬೇಲೂರು ಮಠದಲ್ಲಿ ನಾನು ಶ್ರೀಮಾತೆಯವರನ್ನು ಒಮ್ಮೆ ಕಂಡಿದ್ದೆ. ಆಗ ಪೂಜೆಯ ಸಮಯದಲ್ಲಿ ಪೂಜ್ಯ ರಾಖಾಲ್ ಮಹಾರಾಜರು ಬೇಲೂರು ಮಠದಲ್ಲಿರಲಿಲ್ಲ. ಮಹಾಪುರುಷ್ ಮಹಾರಾಜ್, ತುರೀಯಾನಂದಜಿ ಕೂಡ ಇರಲಿಲ್ಲ. ಬಾಬುರಾಮ ಮಹಾರಾಜರ ಪ್ರೇರಣೆಯೇ ಉತ್ಸವಗಳ

ವ್ಯವಸ್ಥೆಗೆ ಮೂಲಕಾರಣವಾಗಿತ್ತು. ಅವರೇ ಎಲ್ಲ ಕಾರ್ಯನಿರ್ವಾಹಕರಾಗಿದ್ದರು. ಒಬ್ಬ ಭಕ್ತನು ಪೂಜೆಯ ಎಲ್ಲ ಖರ್ಚುವೆಚ್ಚಗಳನ್ನು ವಹಿಸಿಕೊಂಡಿದ್ದನು. ಆಗ ಕಲ್ಕತ್ತೆಯಲ್ಲಿ ದೋಣಿಯಲ್ಲೇ ದುರ್ಗಾಮಾತೆಯ ಪ್ರತಿಮೆಯನ್ನು ತರುತ್ತಿದ್ದರು. ಆಗ ದುರ್ಗಾಪೂಜೆಯು ಶ್ರೀರಾಮಕೃಷ್ಣರ ಹಳೆಯ ಮಂದಿರ ಹಾಗೂ ಅದರ ಮುಂದಿದ್ದ ಪ್ರಾಂಗಣದಲ್ಲಿ ನಡೆಯುತ್ತಿತ್ತು. ಆ ಜಾಗಕ್ಕೆ ಬಿದಿರಿನ ಆವರಣ ಹಾಕಿ, ಮೇಲ್ಭಾಗವನ್ನು ಟರ್ಪಾಲಿನಿಂದ ಮುಚ್ಚಿಬಿಡುತ್ತಿದ್ದರು. ಆ ವರ್ಷ ಕೂಡ ಅಲ್ಲೇ ಪೂಜೆ ಮಾಡಲಾಗಿತ್ತು. ನನಗೆ ನೆನಪಿರುವಂತೆ, ಪೂಜ್ಯ ಶಶಿ ಮಹಾರಾಜರ ತಂದೆ ಈಶ್ವರಚಂದ್ರ ಚಕ್ರವರ್ತಿ ತಂತ್ರಧಾರಕ.∩ ಪೂಜೆಯೆಲ್ಲವೂ ವಿಜೃಂಭಣೆಯಿಂದ ಹಾಗೂ ಆನಂದಕರವಾಗಿ ನಡೆದು ಹೋಯಿತು. ಒಂದು ದಿನ ಸೇರಿದ್ದ ಭಕ್ತರೆಲ್ಲರಿಗೆ ಪ್ರಸಾದದ ವ್ಯವಸ್ಥೆ ಮಾಡಲಾಗಿತ್ತು. ಈಚಿನ ದಿನಗಳಿಗೆ ಹೋಲಿಸಿದರೆ ಆಗಿನ ಭಕ್ತರ ಸಂಖ್ಯೆ ತುಂಬ ಕಡಿಮೆ, ನಿಜ. ಇನ್ನೊಂದು ದಿನ ಬಾಬುರಾಮ ಮಹಾರಾಜರು ಬೇಲೂರು ಮಠದ ಸಮೀಪದಲ್ಲಿ ಗಂಗಾತೀರದ ಮೀನುಗಾರರನ್ನೆಲ್ಲ ಕರೆದು ಅವರಿಗೆ ಊಟ ಹಾಕಿಸಿದ್ದರು. ಅವರೆಲ್ಲ ತಮ್ಮ ದೋಣಿಗಳನ್ನು ಬೇಲೂರು ಮಠದ ಘಾಟ್‌ನಲ್ಲೇ ಬಿಡುತ್ತಿದ್ದರು. ಪ್ರತಿದಿನವೂ ಅವರು ಹಣ ತೆಗೆದುಕೊಳ್ಳದೆ ಸ್ವಲ್ಪ ಮೀನನ್ನು ಬೇಲೂರು ಮಠಕ್ಕೆ ಕೊಡುತ್ತಿದ್ದರು. ಅಂದು ಅವರಿಗೆ ಆನಂದವಾಗುವಂತೆ ಹೊಟ್ಟೆತುಂಬ ಪ್ರಸಾದ (ಊಟ) ವಿತರಣೆ ಮಾಡಿದ್ದರು. ಈ ಬಡಜನರಿಗೆ ಶ್ರೀರಾಮಕೃಷ್ಣರ ಪ್ರಸಾದವನ್ನು ಉಣಿಸಿ ಅವರು ಪರಮ ಸಂತೃಪ್ತಿಯನ್ನು ಹೊಂದಿದರು. ಮನುಷ್ಯರಿಗೆ, ವಿಶೇಷವಾಗಿ ಬಡಜನರಿಗೆ ಶ್ರೀರಾಮಕೃಷ್ಣರ ಪ್ರಸಾದ ನೀಡಿ ಅದರಲ್ಲಿ ಆನಂದವನ್ನು ಅನುಭವಿಸುವುದು ಬಾಬುರಾಮ ಮಹಾರಾಜರ ವಿಶೇಷ ವ್ಯಕ್ತಿತ್ವದ ಒಂದು ಮುಖವಾಗಿತ್ತು.

ಬೇಲೂರು ಮಠಕ್ಕೆ ಬರುತ್ತಿದ್ದ ಭಕ್ತರ ಅತಿಥಿಸತ್ಕಾರಗಳ ಕಡೆಗೆ ಅವರ ವಿಶೇಷ ಗಮನವಿರುತ್ತಿತ್ತು. ಅವರು ಹೇಳುತ್ತಿದ್ದರು, ''ನೋಡು, ಅವರು ಶ್ರೀರಾಮಕೃಷ್ಣರ ಬಳಿಗೆ ಬರುತ್ತಾರೆ ಹೊರತು ನನ್ನ ಅಥವಾ ನಿನ್ನ ಬಳಿಗೆ ಅಲ್ಲ. ನೀನು ಖಂಡಿತ ಗುರು ಮಹಾರಾಜರನ್ನು ಪ್ರೀತಿಸುತ್ತೀ ತಾನೆ? ಹಾಗಿದ್ದರೆ ಶ್ರೀರಾಮಕೃಷ್ಣರ ಬಳಿಗೆ ಯಾರು ಬರುತ್ತಾರೋ ಅವರನ್ನು ಅದೇ ದೃಷ್ಟಿಯಿಂದ ನೋಡಬೇಕು. ಅವರನ್ನು ಆತ್ಮೀಯರಂತೆ, ಶ್ರದ್ಧೆ, ಭಕ್ತಿಗಳಿಂದ ಸೇವೆ ಮಾಡಬೇಕು. ಅವರ ಸತ್ಕಾರ, ಆದರಗಳಲ್ಲಿ ಯಾವುದೇ ಲೋಪವುಂಟಾಗದಂತೆ ಎಚ್ಚರಿಕೆ ವಹಿಸಬೇಕು.'' ಬಹುಶಃ ಅತಿಥಿ ಭಕ್ತರ ಮೇಲೆ ನಮ್ಮಲ್ಲಿ ಯಾವುದೇ ಉಪೇಕ್ಷೆ ಉಂಟಾಗದಿರಲಿ ಎಂದೇ ಅವರು ಹೀಗೆಲ್ಲ ಹೇಳುತ್ತಿದ್ದಿರಬೇಕು. ಮನುಷ್ಯರನ್ನು ಕುರಿತಾಗಿ ಅವರ ಈ ಉದಾರತೆ, ವಿಶೇಷ ಆದರ ಇವನ್ನು ಚೆನ್ನಾಗಿ ನಾನು ಗಮನಿಸುತ್ತಿದ್ದೆ.

*

ಬಾಬುರಾಮ ಮಹಾರಾಜರ ಬಲವಾದ ಪ್ರೇರಣೆಯಿಂದ ಹೇಗೆ ನನಗೆ ಶ್ರೀಮಾತೆಯವರ ದೀಕ್ಷಾಲಾಭವಾಯಿತೋ, ಅದೇ ರೀತಿ ಅವರ ವಿಶೇಷವಾದ ಒತ್ತಾಯದ ಮೇರೆಗೆ ಜಯರಾಮಬಾಟಿಗೆ ಹೋಗುವ, ಅವರ ದರ್ಶನ, ಸಾನ್ನಿಧ್ಯಲಾಭಗಳನ್ನು ಪಡೆಯುವ ಸುಯೋಗ ನನಗೆ ಒಮ್ಮೆ ಬಂದೊದಗಿತ್ತು. ಮಾಯಾವತಿಯಲ್ಲಿ ಮೂರು ನಾಲ್ಕು ವರ್ಷಗಳ ಕಾಲ ಇದ್ದು ಬೇಲೂರು ಮಠಕ್ಕೆ ಮರಳಿ ಬಂದ ಸಂದರ್ಭದಲ್ಲಿ ನನಗೆ ಈ ಸುಯೋಗ ಲಭಿಸಿತ್ತು. ಮೇದಿನೀಪುರದಲ್ಲಿ ನೆರೆ ಪರಿಹಾರ ಕಾರ್ಯದಲ್ಲಿ ಕೆಲವು ತಿಂಗಳು ಕೆಲಸ ಮಾಡಿದನಂತರ ನನ್ನ ಮಾಯಾವತಿಗೆ ಕಾರ್ಯನಿಮಿತ್ತ ಕಳುಹಿಸಲಾಗಿತ್ತು. ನಾನು ಮಾಯಾವತಿಗೆ ಹೋಗುವುದು ಬಾಬುರಾಮ ಮಹಾರಾಜರಿಗೆ ಇಷ್ಟವಿರಲಿಲ್ಲ. ನಾನು ಅಲ್ಲಿಗೆ ಹೋಗಲು ಅಸಮ್ಮತಿಯನ್ನು ತಿಳಿಸಲು ಬಾಬುರಾಮ ಮಹಾರಾಜರು ಹೇಳಿದ್ದರು. ಆದರೆ ನಾನು ಹಾಗೆ ಮಾಡಲಿಲ್ಲ. ಸ್ವತಃ ಸ್ವಾಮಿ ಬ್ರಹ್ಮಾನಂದರು ಹಾಗೂ ಸ್ವಾಮಿ ಶಾರದಾನಂದರು ಯಾವ ರೀತಿ ನಿಯೋಜಿದ್ದಾರೋ ಅದನ್ನು ನಾನೇಕೆ ಕಾರಣವಿಲ್ಲದೆ ಅಲ್ಲಗಳೆಯಲಿ? ನಾನು ಮಾಯಾವತಿಗೆ ಹೋಗಲು ನಿರ್ಧಾರವಾದದ್ದನ್ನು ಕೇಳಿಯೇ ಬಾಬುರಾಮ ಮಹಾರಾಮ ಒಳಗೊಳಗೆ ಕಿಡಿಕಿಡಿಯಾಗಿದ್ದರು ಎಂದು ನನಗೆ ತಿಳಿದು ಬಂತು. ಅದರೊಂದಿಗೆ, ಅವರಿಗೆ ನನ್ನ ಮೇಲೆ ಅಹೇತುಕವಾದ ಸ್ನೇಹ, ಪ್ರೀತಿಗಳಿದ್ದುದು ಅವರು ಹಾಗೆ ವರ್ತಿಸಲು ಕಾರಣವಾಗಿತ್ತು.

ಮೂರು ನಾಲ್ಕು ವರ್ಷಗಳ ನಂತರ ಮಾಯಾವತಿಯಿಂದ ಕೆಲವು ದಿನಗಳ ಮಟ್ಟಿಗೆ ಬೇಲೂರು ಮಠಕ್ಕೆ ಬಂದಿದ್ದಾಗ, ಬಾಬುರಾಮ ಮಹಾರಾಜರು ಒಂದು ದಿನ ಬೆಳಿಗ್ಗೆ ಕೇಳಿದರು, ''ನೀನಂತೂ ಈಗ ಈ ಕಡೆ ಬರುವುದನ್ನೇ ಬಿಟ್ಟಿದ್ದೀಯಲ್ಲ? ಅಲ್ಲೋ, ಇಲ್ಲಿಗಂತೂ ಬಂದಿದ್ದೀಯಾ. ಶ್ರೀಮಾತೆಯವರ ದರ್ಶನ ಮಾಡಿದ್ದೀಯಾ? ಎಂದಾದರೂ ಉದ್ಬೋಧನ, ಜಯರಾಮಬಾಟಿಗಳಿಗೆ ಹೋಗಿದ್ದೀಯಾ?'' ನಾನಂದೆ, ''ಇಲ್ಲ ಮಹಾರಾಜ್; ಈ ಸಲ ನಾನು ಅವರ ದರ್ಶನ ಮಾಡಿಲ್ಲ. ಜಯರಾಮಬಾಟಿಗೆ ಎಂದೂ ಹೋಗೇ ಇಲ್ಲ.'' ಜಯರಾಮಬಾಟಿ ಬಗ್ಗೆ ನನಗೆ ಒಂದು ರೀತಿಯ ಭಯವಿತ್ತು. ಜಯರಾಮಬಾಟಿ ಸೊಳ್ಳೆ, ಮಲೇರಿಯಾಗಳಿಗೆ ಆವಾಸಸ್ಥಾನ ಎಂದು ಕೇಳಿದ್ದೆ. ಅಂಥ ಸ್ಥಳಕ್ಕೆ ನಾನಾಗಿಯೇ ಹೋಗುವ ಇಚ್ಛೆ ನನಗೆಂದೂ ಉಂಟಾಗಿರಲಿಲ್ಲ. ಯಾತ್ರಿಕನು ತೀರ್ಥಯಾತ್ರೆಗೆ ಹೋಗುವಾಗ ಎಂತಹ ಶ್ರದ್ಧೆ, ಭಕ್ತಿಗಳಿಂದ ಹೋಗುವನೋ ಅದೇ ಭಾವದಿಂದ ಜಯರಾಮಬಾಟಿಗೆ ಹೋಗಬೇಕೆಂಬ ಆಲೋಚನೆ ನನಗೆಂದೂ ಬರಲಿಲ್ಲ. ಬಾಬುರಾಮ ಮಹಾರಾಜರು ಹೇಳಿದರು, ''ಈ ಸಲ ಮಾಯಾವತಿಗೆ ಹೋಗುವ ಮುನ್ನ ಜಯರಾಮಬಾಟಿಗೊಮ್ಮೆ ಹೋಗಿ ಬರಬಾರದೇಕೆ?'' ನಾನೇನೊ ಹೋಗುತ್ತೇನೆ, ಆದರೆ ಹೋಗಲು ದುಡ್ಡಾದರೂ ಎಲ್ಲಿದೆ? ಮಾಯಾವತಿಗೆ ಮರಳಲು ಬೇಕಾದಷ್ಟು ಹಣವಷ್ಟೇ ನನ್ನ ಬಳಿ ಇತ್ತು. ಅದಕ್ಕಿಂತ ಹೆಚ್ಚು ಒಂದು ಪೈಸೆ ಹಣವೂ ನನ್ನಲ್ಲಿರಲಿಲ್ಲ. ಹೀಗಾಗಿ ಜಯರಾಮಬಾಟಿ ಹೋಗುವುದು ಹೇಗೆ? ಈ ವಿಷಯವನ್ನು ಬಾಬುರಾಮ ಮಹಾರಾಜರಿಗೆ ತಿಳಿಸಿದಾಗ ಅವರೆಂದರು: ''ನೀನು ಹಣದ ವಿಷಯವಾಗಿ ಚಿಂತೆ ಮಾಡಬೇಡ. ಅದಕ್ಕೆ ವ್ಯವಸ್ಥೆಯಾಗುತ್ತದೆ.'' ಆ ಬಳಿಕ ಸಾಯಂಕಾಲ ನನ್ನನ್ನು ಕರೆದು ಅವರೆಂದರು: ''ನಾಳೆ ಬೆಳಿಗ್ಗೆಯೇ ಹೊರಟುಬಿಡು. ಶ್ರೀರಾಮಪುರದಿಂದ ಒಬ್ಬ ಭಕ್ತ ಹಾಗೂ ಒಬ್ಬಾಕೆ ಮಹಿಳೆ ಇಬ್ಬರೂ ದೀಕ್ಷೆ ಪಡೆಯಲು ಜಯರಾಮಬಾಟಿಗೆ ಹೋಗುತ್ತಾರೆ. ಅವರು ಹಾಗೆ ಸ್ಟೇಶನ್ನಿನಲ್ಲಿ ನಿನಗಾಗಿ ಕಾಯುತ್ತಿರುತ್ತಾರೆ. ನೀನು ಅವರೊಂದಿಗೆ ಹೋಗಿ ಬಾ.'' ಹೊರಡುವಾಗ ಎಲ್ಲವೂ ಸುಸೂತ್ರವಾಗಿ ನಡೆಯಿತು. ಆ ಭಕ್ತರುಗಳ ದೀಕ್ಷೆ ನಡೆಯುವುದು

---

∩ ಪೂಜಾರಿಯ ಬಳಿಕುಳಿತು, ಪೂಜೆಯ ವಿಧಾನಗಳನ್ನು ತಿಳಿಸಿ, ನೆರವೇರಿಸಿ ಕೊಡುವವನು. *(–ಅನು)*

ವಾಸಂತಿ ಪೂಜೆಯ ಸಪ್ತಮಿಯ ದಿನವೆಂದು ನಿಗದಿತವಾಗಿತ್ತು. ಅದಕ್ಕೆ ಆ ದಿನ ನಾವು ಅಲ್ಲಿಗೆ ತಲುಪಿದ್ದೆವು. ನನ್ನ ಟಿಕೆಟ್ ಇತ್ಯಾದಿಗಳ ಖರ್ಚುವೆಚ್ಚವನ್ನೆಲ್ಲ ಅವರೇ ವಹಿಸಿಕೊಂಡಿದ್ದರು.

ಜಯರಾಮಬಾಟಿಯಲ್ಲಿ ಆ ಸಲ ನಾನು ಮೂರು ನಾಲ್ಕು ದಿನ ತಂಗಿದ್ದೆ. ಅಲ್ಲಿದ್ದ ವರದ, ರಾಮಮಯ ಎಂಬ ಇಬ್ಬರು ಹುಡುಗರನ್ನು ನಾನು ಮೊದಲ ಬಾರಿಗೆ ಕಂಡೆ. ಇವರಲ್ಲದೆ ಅಲ್ಲೊಬ್ಬ ಬಲಿಷ್ಠನಾದ, ಸಮರ್ಥ ವ್ಯಕ್ತಿತ್ವದ ಒಬ್ಬ ಯುವಕನನ್ನು ಕಂಡೆ. ಅವನನ್ನು ಕಂಡಾಗಲೇ ಅವನು ಯಾವುದಕ್ಕೂ ಲೆಕ್ಕಿಸದ ವ್ಯಕ್ತಿಯಂತೆ ಕಂಡುಬಂದ. ಅವನೇ ಸಿಲ್ಹೆಟಿನ ಜ್ಞಾನ್. ನನಗೆ ಅವನ ಪರಿಚಯವಿತ್ತು. ನನ್ನನ್ನು ನೋಡಿದ ಕೂಡಲೇ ಅವನು ಬರಮಾಡಿಕೊಂಡ — ''ಬನ್ನಿ ಬನ್ನಿ; ಆ ಕಡೆಗೆ ಹೋಗಿ, ಶ್ರೀಮಾತೆಯವರ ದರ್ಶನ ಮಾಡಿ.'' ಜಯರಾಮಬಾಟಿಯಲ್ಲಿ ಯಾವ ಕಡೆ ಯಾವ ಕೋಣೆಯಿದೆ; ಯಾವ ಯಾವ ಕೋಣೆಯಲ್ಲಿ ಯಾರು ವಾಸಿಸುತ್ತಾರೆ, ಎಲ್ಲೆಲ್ಲಿ ಏನೇನು ನಡೆಯುತ್ತದೆ ಇತ್ಯಾದಿ ಏನೇನೂ ನನಗೆ ತಿಳಿದಿರಲಿಲ್ಲ. ಜ್ಞಾನನು ನನ್ನನ್ನು ಅಡಿಗೆಮನೆಯ ಕಡೆಗೆ ಕರೆದುಕೊಂಡು ಹೋಗುತ್ತಿದ್ದುದನ್ನು ಕಂಡು ನನಗೆ ಆಶ್ಚರ್ಯವಾಯಿತು. ತುಸು ಜೋರಾಗಿಯೇ ನಾನು ಹೇಳಿದೆ, ''ಎಲ್ಲಿಗೆ ನನ್ನನ್ನು ಕರೆದುಕೊಂಡೊಯ್ಯುತ್ತೀದ್ದಿಯಾ? ಅಡಿಗೆ ಮನೆಗೆ ನನ್ನನ್ನೇಕೆ ಕರೆದುಕೊಂಡು ಹೋಗುತ್ತಿದ್ದೀಯಾ? ಶ್ರೀಮಾತೆ ಎಲ್ಲಿದ್ದಾರೆ? ನಾನು ಶ್ರೀಮಾತೆಯವರಿಗೆ ಪ್ರಣಾಮ ಮಾಡಲು ಬಂದೆ ನಿಜ, ಆದರೆ ಅವರೀಗ ಅಡುಗೆ ಮನೆಯಲ್ಲಿ ಕೆಲಸದಲ್ಲಿ ಮಗ್ನರಾಗಿರಬೇಕಲ್ಲವೆ? ಅವರಿಗೆ ಅಲ್ಲಿನ ಕೆಲಸಗಳು ಮುಗಿಯುವವರೆಗೆ ನಾನು ಕಾಯಬಲ್ಲೆ.'' ಆದರೆ ಏನು ಹೇಳಿ ಏನು ಪ್ರಯೋಜನ? ಜ್ಞಾನನನ್ನು ನಾನು ತಡೆಯಲಾರದೆ ಹೋದೆ. ಅವನು ನನ್ನನ್ನು ಶ್ರೀಮಾತೆಯವರ ಎದುರು ಕರೆದುಕೊಂಡು ಹೋಗಿ ನಿಲ್ಲಿಸಿಯೇ ಬಿಟ್ಟ. ಅಲ್ಲೇ ನಾನು ಶ್ರೀಮಾತೆಯವರಿಗೆ ಪ್ರಣಾಮ ಮಾಡಿದೆ. ನಾನು ಶ್ರೀಮಾತೆಯವರನ್ನು ಕೇಳಿದೆ, ''ಅಮ್ಮಾ, ನೀವಿಲ್ಲಿ ಏನು ಮಾಡುತ್ತಿದ್ದೀರಿ? ಚಪಾತಿ ಬೇಯಿಸುತ್ತಿದ್ದೀರಾ?'' ಅದಕ್ಕೆ ಅವರು, ''ಮಗೂ, ಇಲ್ಲಿನ ಜನ ಚಪಾತಿ ತಿನ್ನುವುದಿಲ್ಲ. ಕಲ್ಕತ್ತದಿಂದ ನನ್ನ ಮಕ್ಕಳು ಬಂದಾಗ ಅವರಿಗೆ ತಿನ್ನಲು ನಾನು ಚಪಾತಿ ಮಾಡಿಕೊಡುತ್ತೇನೆ'' ಎಂದರು. ಆಗ ಜಯರಾಮಬಾಟಿಯಲ್ಲಿ ಬಹಳ ಮಂದಿ ಅತಿಥಿಗಳು ಇದ್ದರು. ಅವರಿಗಾಗಿ ಶ್ರೀಮಾತೆ ಚಪಾತಿ ಮಾಡುತ್ತಿದ್ದರು. ಶ್ರೀಮಾತೆ ನನಗೆ, ''ಹೋಗು ಮಗೂ, ಕೈಕಾಲು ಮುಖ ತೊಳೆದು ಬಾ, ನಾನು ಸ್ವಲ್ಪ ಹೊತ್ತಿನಲ್ಲಿ ಬರುತ್ತೇನೆ'' ಎಂದರು. ನನ್ನ ಜೊತೆಗಿದ್ದವರು ಮಂತ್ರದೀಕ್ಷೆಗೆ ಅರ್ಜಿ ಪತ್ರಗಳನ್ನು ಶ್ರೀಮಾತೆಯವರಿಗೆ ಕೊಟ್ಟರು. ಸಪ್ತಮಿಯ ದಿನ ಅವರ ಮಂತ್ರದೀಕ್ಷೆ ನಡೆಯುವುದೆಂದು ನಿಗದಿಯಾಯಿತು. ವಾಸಂತಿ ಪೂಜೆಯ ಸಮಯದಲ್ಲಿ ನಾವು ಅಲ್ಲಿಗೆ ತಲುಪಿದ್ದೆವೆಂದು ಆಗಲೇ ಹೇಳಿದ್ದಾಗಿದೆ.

ಜಯರಾಮಬಾಟಿಯಲ್ಲಿ ನಾನು ಶ್ರೀಮಾತೆಯವರನ್ನು ಬೇರೆ ರೀತಿಯಲ್ಲಿ ನೋಡಿದೆ. ಕಲ್ಕತೆಯಲ್ಲಿ 'ಉದ್ಬೋಧನ'ದಲ್ಲಿ ಇದ್ದಂತೆ ಅವರು ಇಲ್ಲಿ ಇರಲಿಲ್ಲ. ಇಲ್ಲಿ ಶ್ರೀಮಾತೆ ತನ್ನದೇ ಮನೆಯಲ್ಲಿದ್ದಂತೆ, ತಲೆಯ ಮೇಲೆ ಸೆರಗಿಲ್ಲದೆ ಓಡಾಡುತ್ತಿದ್ದರು. ಅವರು ಸರಳತೆ ಹಾಗೂ ಪವಿತ್ರತೆಯ ಸಾಕಾರಮೂರ್ತಿಯಂತಿದ್ದರು. ಅವರು ಹಲವು ಬಗೆಯ ಮನೆಗೆಲಸಗಳಲ್ಲಿ ನಿರತರಾಗಿದ್ದರು. ಒಂದು ದಿನ ಬೆಳಿಗ್ಗೆ ಅವರು ಕೈಯಲ್ಲಿ ಒಂದು ಪಾತ್ರೆಯನ್ನು ಹಿಡಿದುಕೊಂಡು ಕಷ್ಟಪಟ್ಟು ನಡೆಯುತ್ತಿದ್ದುದನ್ನು ಕಂಡೆ. ಬಹುಶಃ ಅವರ ಕಾಲಿನ ವಾತದ ಕಾರಣದಿಂದ ನಡೆಯಲು ಕಷ್ಟಪಡುತ್ತಿದ್ದಿರಬೇಕು. ಬಹುಶಃ ನೆರೆಮನೆಗೆ ಅವರು ಆ ಪಾತ್ರೆಯನ್ನು ಕೊಂಡೊಯ್ಯುತ್ತಿದ್ದರು. ಅವರನ್ನು ದಾರಿಯ ನಡುವೆ ಕಂಡಾಗ ಕೇಳಿದೆ, ''ಇಷ್ಟು ಬೆಳಿಗ್ಗೆ ನೀವು ಎಲ್ಲಿಗೆ ಹೋಗುತ್ತಿದ್ದೀರಿ, ಅಮ್ಮಾ?'' ಅದಕ್ಕೆ ಅವರು, ''ಹಾಲಿಗಾಗಿ ಗೌಳಿಗರ ಮನೆಗೆ ಹೋಗುತ್ತಿದ್ದೇನೆ. ಕಲ್ಕತ್ತಾದ ನನ್ನ ಮಕ್ಕಳಿಗೆ ಬೆಳಿಗ್ಗೆ ಚಹಾ ಕುಡಿಯುವ ಅಭ್ಯಾಸ. ಅದಕ್ಕಾಗಿ ಅವರಿಗೆ ಹಾಲು ತರಲು ಹೋಗುತ್ತಿದ್ದೇನೆ'' ಎಂದರು. ಹಾಲು ತರಲು ಶ್ರೀಮಾತೆ ಸ್ವತಃ ತಾವೇ ಹೋಗುತ್ತಿದ್ದದನ್ನು ಕಂಡು ನಾನು ಆಶ್ಚರ್ಯಚಕಿತನಾದೆ. 'ಉದ್ಬೋಧನ'ದಲ್ಲಿ ಅವರಿಗೆ ಹೊರಗಡೆ ಓಡಾಡಲು ಅವಕಾಶವಿರಲಿಲ್ಲ. ಅಲ್ಲಿ ಅವರು ಯಾವಾಗಲೂ ನವವಧುವಿನಂತೆ ಮರೆಯಲ್ಲಿಯೇ ಇರಬೇಕಾಗಿತ್ತು. ಆದರೆ ಅವರು ಜಯರಾಮಬಾಟಿಯಲ್ಲಿ ಸ್ವತಂತ್ರರು; ಯಾವಾಗಲೂ ಕೆಲಸ ಮಾಡುತ್ತಿದ್ದರು, ಎಲ್ಲ ಕೆಲಸಗಳನ್ನೂ ತಾವೇ ಮಾಡುತ್ತಿದ್ದರು. ಮುಂದಕ್ಕೆ ಹೋಗುತ್ತಿದ್ದ ಅವರು ಹಿಂದಿರುಗಿ ನೋಡಿ ಹೇಳಿದರು, ''ಆ ಕೋಣೆಯ ಜಗಲಿಯಲ್ಲಿ ತರಕಾರಿ ಹೆಚ್ಚುವಾಗ ನೀನು ಮಾಯಾವತಿಗೆ ಸಂಬಂಧಪಟ್ಟ ಸಂಗತಿಗಳನ್ನು ಹೇಳು, ನೋಡೋಣ.'' ಅವರು ತಮ್ಮ ಮಲಗುವ ಕೋಣೆಯ ಹೊರಗೆ ತರಕಾರಿ ಹೆಚ್ಚುತ್ತಿದ್ದರು. ಮತ್ತೆ ಅವರು, ''ಅಲ್ಲಿಗೆ ನೀನು ಬಂದು ಮಾಯಾವತಿಯ ವಿಷಯಗಳನ್ನೆಲ್ಲ ಹೇಳಬೇಕು'' ಎಂದರು.

ಅವರು ಹೇಳಿದಂತೆಯೇ ನಾನು ಸರಿಯಾದ ಸಮಯಕ್ಕೆ ಅಲ್ಲಿಗೆ ಹೋದೆ. ಅವರು ತರಕಾರಿ ಹೆಚ್ಚತೊಡಗಿದರು; ನಾನು ಮಾಯಾವತಿಯ ವಿಷಯಗಳನ್ನು ಹೇಳುತ್ತ ಹೋದೆ. ಜಯರಾಮಬಾಟಿಯಲ್ಲಿ ಮೂರು ನಾಲ್ಕು ದಿನಗಳಲ್ಲೂ ಹೀಗೆಯೇ ಮಾಯಾವತಿಯನ್ನು ಕುರಿತ ಮಾತುಗಳು ನಡೆಯುತ್ತಿದ್ದವು.

ಅವರು ಆಧ್ಯಾತ್ಮಿಕ ಅಥವಾ ಸಾಧನೆಗಳನ್ನು ಕುರಿತಂತೆ ನನಗೆ ಹೆಚ್ಚೇನನ್ನೂ ಹೇಳಲಿಲ್ಲ. ನಾನೂ ಅವರನ್ನು ಆ ಕುರಿತು ಕೇಳಲಿಲ್ಲ. ಆದರೂ ಮಾತಿನ ನಡುವೆ ಅವರು ಹೇಳಿದರು, ''ಎಲ್ಲೇ ಇರು; ಎಂತಹ ಕೆಲಸವನ್ನಾದರೂ ಮಾಡುತ್ತಿರು, ಶ್ರೀರಾಮಕೃಷ್ಣರನ್ನು ದೃಢವಾಗಿ ಅವಲಂಬಿಸಿರು.'' ಅವರು ಕೆಲವೇ ಮಾತುಗಳಲ್ಲಿ ಉಪದೇಶ ನೀಡುತ್ತಿದ್ದರು. ತಮ್ಮ ಆಧ್ಯಾತ್ಮಿಕ ಅನುಭವಗಳನ್ನು ಕುರಿತು ಅವರು ನನಗೆ ಎಂದೂ ಯಾವ ವಿಷಯವನ್ನೂ ಹೇಳಲಿಲ್ಲ.

ಶ್ರೀಮಾತೆಯವರು ದೇಹತ್ಯಾಗ ಮಾಡುವ ಮುನ್ನ ಅವರನ್ನು ನಾನು ಕೊನೆಯ ಬಾರಿ ಕಂಡಿದ್ದು 'ಉದ್ಬೋಧನ'ದಲ್ಲಿ. ಆಗ ಅವರು ಅತ್ಯಂತ ಅನಾರೋಗ್ಯದಿಂದ್ದರು. ಆಗ ಶ್ಯಾಮದಾಸ ಕವಿರಾಜ ಎಂಬ ವೈದ್ಯ ಪ್ರತಿದಿನ ನಿಯಮಿತವಾಗಿ 'ಉದ್ಬೋಧನಕ್ಕೆ' ಬಂದು ಅವರಿಗೆ ಚಿಕಿತ್ಸೆ ಮಾಡಿ, ಔಷಧೋಪಚಾರಗಳನ್ನು ನೀಡಿ ಹೋಗುತ್ತಿದ್ದ. ಆಗ ಶ್ರೀಮಾತೆಯವರು ಶಾಂತ ಭಾವದಿಂದ ಎಲ್ಲವನ್ನೂ ಸಹಿಸಿಕೊಂಡು ಹೋಗುತ್ತಿದ್ದರು. ಸತೀಶ್ ಮಹಾರಾಜ್ (ಕಾಶಿಯಲ್ಲಿದ್ದ ಸ್ವಾಮಿ ಸತ್ಯಾನಂದರು) ಮತ್ತು ನಾನು ಶ್ರೀಮಾತೆಯವರಿಗೆ ಪ್ರಣಾಮ

ಮಾಡಲು ಹೋಗಿದ್ದವು. ಬೇಲೂರು ಮಠದಿಂದ ನಾನು ಮಾಯಾವತಿಗೆ ಹೋಗುವುದು ಹಾಗೂ ಅಲ್ಲಿಂದ ಮಾನಸ ಸರೋವರಕ್ಕೆ ಯಾತ್ರೆ ಹೋಗುವ ವಿಷಯವಾಗಿಯೂ ಮಾತು ಬಂತು. ಇದಕ್ಕೆ ನಾನು ಶ್ರೀಮಾತೆಯವರ ಆಶೀರ್ವಾದವನ್ನು ಕೋರಿದೆ. ಎಲ್ಲವನ್ನು ಕೇಳಿ ಅವರೆಂದರು, ''ಮಗೂ, ಮಾನಸ ಸರೋವರ ಯಾತ್ರೆ ಅತ್ಯಂತ ದುರ್ಗಮ ಎಂದು ನಾನು ಕೇಳಿದ್ದೇನೆ. ತುಂಬ ಜಾಗ್ರತೆಯಿಂದಿರು. ಏನೇ ಮಾಡು, ಯಾವಾಗಲೂ ಶ್ರೀರಾಮಕೃಷ್ಣರನ್ನೇ ಅವಲಂಬಿಸಿರು'' ಎಂದರು. ಮಾನಸ ಸರೋವರ ಯಾತ್ರೆಯ ನಡುವೆ ನನಗೊಂದು ಆಶ್ಚರ್ಯಕರವಾದ ದರ್ಶನವುಂಟಾಯಿತು — ಅದು ಸ್ವಪ್ನದರ್ಶನ. ಇಲ್ಲಿ ಒಂದು ವಿಷಯವನ್ನು ಹೇಳಬೇಕು — ಸಾಮಾನ್ಯವಾಗಿ ನನಗೆ ದರ್ಶನ ಇತ್ಯಾದಿಗಳಲ್ಲಿ ಅಷ್ಟೊಂದು ನಂಬಿಕೆಯಿಲ್ಲ.

ಮಾನಸ ಸರೋವರಕ್ಕೆ ಹೋಗುವ ಮಾರ್ಗದಲ್ಲಿ ಆಲ್ಮೋರ ಜಿಲ್ಲೆಯ ಒಂದು ಸ್ಥಳದಲ್ಲಿ ಕೆಲವು ದಿನಗಳ ಕಾಲ ನಾವು ವಿಶ್ರಮಿಸಿಕೊಳ್ಳುತ್ತಿದ್ದೆವು. ಅಲ್ಲಿ ನಾವು ಕೆಲವು ಮಂದಿ ಪರಿಚಿತರಾದ ವ್ಯಾಪಾರಿಗಳ ಅತಿಥಿಗಳಾಗಿದ್ದೆವು. ಒಂದು ಸಣ್ಣ ಮನೆಯಲ್ಲಿ ನಮಗೆ ವಾಸಿಸಲು ವ್ಯವಸ್ಥೆ ಮಾಡಿಕೊಟ್ಟಿದ್ದರು. ಅಲ್ಲೇ ಎರಡನೇ ಅಥವಾ ಮೂರನೇ ರಾತ್ರಿ ನಾನು ಒಂದು ಕನಸನ್ನು ಕಂಡೆ. ನಿದ್ದೆಯಿಂದೆದ್ದು ನೋಡಿದಾಗ ಸಮಯ — ರಾತ್ರಿ ಎರಡು ಗಂಟೆ.

ಕನಸಿನಲ್ಲಿ ನಾನು ಶ್ರೀಮಾತೆಯವರನ್ನು ಕಂಡೆ. ಶ್ರೀಮಾತೆಯವರನ್ನು ಅತ್ಯಂತ ಅದ್ಭುತವಾಗಿ ಅಲಂಕರಿಸಿದ್ದರು. ಅವರ ಎರಡೂ ಪಾದಗಳಿಗೆ ಅಲತಾ ಹಚ್ಚಲಾಗಿತ್ತು. ಸುಂದರವಾದ ಶುಭ್ರ ವಸ್ತ್ರವನ್ನು ಅವರು ಧರಿಸಿದ್ದರು. ಕೊರಳಲ್ಲಿ ಒಂದು ಹೂಮಾಲೆ. ಶ್ರೀಮಾತೆಯವರು ಅತಿಹೆಚ್ಚಿನ ಕಾಂತಿಯಿಂದ ಕಂಗೊಳಿಸುತ್ತಿದ್ದರು. ಶ್ರೀಮಾತೆಯವರನ್ನು ಕರೆದುಕೊಂಡು ಬಂದು ಕುಳ್ಳಿರಿಸಿದ್ದ ಸ್ಥಳವನ್ನು ನಾನು ಸ್ಪಷ್ಟವಾಗಿ ಕಂಡಿದ್ದೆ. ಅದು ಗಂಗಾತೀರದಲ್ಲಿ ಈಗ ಶ್ರೀಮಾತೆಯವರ ಮಂದಿರವಿರುವ ಸ್ಥಳವಾಗಿತ್ತು. ಅಲ್ಲಿ ಅನೇಕ ಮಂದಿ ನೆರೆದಿದ್ದರು. ಅವರು ಶ್ರೀಮಾತೆಯವರನ್ನು ಭುಜದಲ್ಲಿ ಹೊತ್ತು ತಂದರೋ, ಅಥವಾ ಗಾಡಿಯಲ್ಲಿ ಕರೆತಂದರೋ ಗೊತ್ತಾಗಲಿಲ್ಲ. ಜನಸಂದಣಿಯ ನಡುವೆ ನಾನು ಮೂರು ಜನರನ್ನು ಸ್ಪಷ್ಟವಾಗಿ ಗುರುತಿಸಿದೆ. ಮಾಖನ್ ಸೇನ್, ಸುರೇಶ್ ಮಜುಮದಾರ ಹಾಗೂ ಆಗ ಗುಂಪಿನಲ್ಲಿದ್ದ ಇನ್ನೊಬ್ಬ ದೊಡ್ಡ ವ್ಯಕ್ತಿ — ಅವನ ಹೆಸರೀಗ ನೆನಪಿಲ್ಲ — ಅವರೆ ಆ ಮೂವರು. ಆಶ್ಚರ್ಯದ ವಿಷಯವೆಂದರೆ, ಶ್ರೀಮಾತೆಯವರನ್ನು ಕುರಿತಂತೆ ಇಂಥ ಕನಸು ಮತ್ತೊಮ್ಮೆ ಎಂದಿಗೂ ನನಗೆ ಬೀಳಲಿಲ್ಲ.

ಮಾನಸ ಸರೋವರದಿಂದ ಮರಳಿ ಬರುವಾಗ ನಾವು ತಾಕಲ್‌ಕೋಟ್‌ನಲ್ಲಿ ವಿಶ್ರಾಮಿಸಿದೆವು. ತಾಕಲ್‌ಕೋಟ್ ಒಂದು ದೊಡ್ಡ ವ್ಯಾಪಾರ ಕೇಂದ್ರ. ಅಲ್ಲಿ ಆಗ ಸಾಮಾನ್ಯವಾಗಿ ವಸ್ತು ವಿನಿಮಯದ ಮೂಲಕ ವ್ಯಾಪಾರ ನಡೆಯುತ್ತಿತ್ತು. ಅಂದರೆ ಅಲ್ಲಿ ಭಾರತೀಯ ವಸ್ತುಗಳಿಗೆ ಪ್ರತಿಯಾಗಿ ಅಲ್ಲಿನ ವಸ್ತುಗಳ ವಿನಿಮಯ ನಡೆಯುತ್ತಿತ್ತು. ಉಣ್ಣೆ ಹಾಗೂ ಉಣ್ಣೆಯ ಬಟ್ಟೆಬರೆಗಳ ವಿನಿಮಯ ಅಲ್ಲಿನ ಮುಖ್ಯವ್ಯಾಪಾರ. ಭಾರತರ ಬಾಸಿಂದ, ಭುಟಿಯಾರ್ ಜನಾಂಗದವರು ಅಲ್ಲಿಗೆ ಹೋಗಿ ವ್ಯಾಪಾರ ಮಾಡಿ ಬರುತ್ತಿದ್ದರು. ಭಾರತ ಸರ್ಕಾರದ ವತಿಯಿಂದ ಒಬ್ಬ ಮುಖ್ಯಸ್ಥ ಅಲ್ಲಿಗೆ ಹೋಗಿ ಎಲ್ಲ ನೋಡಿಕೊಳ್ಳುತ್ತಿದ್ದ; ದರ ಇತ್ಯಾದಿಗಳನ್ನು ನಿಗದಿ ಮಾಡುತ್ತಿದ್ದ. ಕೆಲಸಗಾರರೊಂದಿಗೆ ಅವನೊಂದು ದೊಡ್ಡ ಡೇರೆಯೊಳಗೆ ವಾಸಿಸುತ್ತಿದ್ದ.

ನಾವು ಹೋಗುವಾಗ ಅವನನ್ನು ನೋಡಿರಲಿಲ್ಲ; ಆದರೆ ಮರಳಿ ಬರುವಾಗ ಅವನು ಕಾಣಿಸಿಕೊಂಡ. ಅವನು ಪಂಜಾಬ್ ನಿವಾಸಿಯಾಗಿದ್ದ. ಅವನು ಕಾಣಸಿಕ್ಕಿದ ಪ್ರದೇಶಕ್ಕಿಂತ ಅವನ ಡೇರೆ ತುಸು ದೂರವಿತ್ತು. ನಮ್ಮನ್ನು ಅಲ್ಲಿಗೆ ಕರೆದುಕೊಂಡು ಹೋಗುವುದಾಗಿ ಅವನು ತುಂಬಾ ಒತ್ತಾಯಿಸಿ ಕೇಳಿಕೊಂಡ. ನಮಗೆ ನಮಸ್ಕಾರ ಮಾಡಿ ಅವನೆಂದ: ''ಮಹಾರಾಜ್, ನಿಮಗಾಗಿಯೇ ನಾನು ಕಾಯುತ್ತಿದ್ದೆ.''

ಅವನ ಡೇರೆಗೆ ಹೋದ ಮೇಲೆ ನಮಗೆ ತುಂಬಾ ನಿರಾಳವಾಯಿತು. ಅಲ್ಲಿ ಒಂದೆರಡು ವೃತ್ತಪತ್ರಿಕೆಗಳನ್ನು ನೋಡಿದೆ. ಮೊದಲು ಅವನು ಹೇಳಿದ ಆ ಪತ್ರಿಕೆಗಳನ್ನು ನಮಗೆ ಓದಲು ಕೊಡಲಿಲ್ಲ. ಚಹಾ ಕುಡಿದ ನಂತರ ಅವನು ಹೇಳಿದ — ರಾಮಕೃಷ್ಣ ಸಂಘಕ್ಕೆ ಸಂಬಂಧಿಸಿದಂತೆ ಒಂದು ದುಃಖಕರವಾದ ವಾರ್ತೆ ಇದೆ. ಪಂಜಾಬಿನಿಂದ ಪ್ರಕಟಗೊಳ್ಳುವ ಒಂದು ಪತ್ರಿಕೆಯನ್ನು ಅವನು ಓದಲು ನಮ್ಮ ಕೈಗಿತ್ತ. ಎರಡು ದುರ್ಘಟನೆಗಳು ಆ ಪತ್ರಿಕೆಯಲ್ಲಿ ಮುದ್ರಿತವಾಗಿದ್ದವು. ಒಂದನೆಯದು, ಶ್ರೀಮಾತೆಯವರ ದೇಹತ್ಯಾಗ. ಬಹುತೇಕ ವಿವರವಾಗಿಯೇ ಆ ಸುದ್ದಿಯನ್ನು ಪ್ರಕಟಿಸಲಾಗಿತ್ತು. ಎರಡನೆಯ ಸುದ್ದಿಯೆಂದರೆ, ಒಬ್ಬ ಪ್ರಖ್ಯಾತ ಜನನಾಯಕನ ಮರಣ ವಾರ್ತೆ.

ಈ ಸಂದರ್ಭದಲ್ಲಿ ಉಲ್ಲೇಖಿಸಬಹುದಾದ ವಿಷಯವೆಂದರೆ, ಯಾವ ರಾತ್ರಿ ನಾನು ಶ್ರೀಮಾತೆಯವರ ದೇಹತ್ಯಾಗದ ಕನಸನ್ನು ಕಂಡಿದ್ದೆನೋ, ಅದರ ಮರುದಿನ ಆ ಬಗ್ಗೆ ಬರೆದಿಡಲು ನಾನು ಸತೀಶನಿಗೆ ಹೇಳಿದ್ದೆ. ಪತ್ರಿಕೆಯಲ್ಲಿ ಬಂದ ಸುದ್ದಿಯನ್ನು ನೋಡಿದಾಗ ತಿಳಿದುಬಂತು — ಅದೇ ದಿನ ಶ್ರೀಮಾತೆ ದೇಹತ್ಯಾಗ ಮಾಡಿದ್ದರು.

ಆದರೆ ಶ್ರೀಮಾತೆ ಇನ್ನೆಂದಿಗೂ ನನಗೆ ಕನಸಿನಲ್ಲಿ ಕಾಣಿಸಿಕೊಳ್ಳಲಿಲ್ಲ. ಅವರನ್ನು ಕನಸಿನಲ್ಲಿ ಕಂಡಿದ್ದು ಅದೊಂದೇ ಬಾರಿ; ಆದರೆ ಅತ್ಯಂತ ಸ್ಪಷ್ಟವಾದ ದರ್ಶನವಾಗಿತ್ತು. ಅವರ ಮುಖ, ಕಣ್ಣುಗಳು, ಅವರ ಸುತ್ತಮುತ್ತಣ ಜನಸಂದಣಿ ಎಲ್ಲವನ್ನು ನಾನು ಸ್ಪಷ್ಟವಾಗಿ ನೋಡಿದ್ದೆ. ನನಗೆ ನೆನಪಿದೆ– ಅಪೂರ್ವವಾದ, ಸುಂದರವಾದ ಮುಖಮಂಡಲವದು — ನಾನು ಕನಸಿನಲ್ಲಿ ಕಂಡ ಅದೇ ಮುಖ![೨] ❋

---

೨ ೧೯೬೦ರ ಮಾರ್ಚ್‌ನಲ್ಲಿ ಸ್ವಾಮಿ ಬುಧಾನಂದರು, ಸ್ವಾಮಿ ಅಭಯಾನಂದರ ಸ್ಮೃತಿಕಥೆಯನ್ನು ಟೇಪ್‌ರೆಕಾರ್ಡ್ ಮಾಡಿ ಸಂಗ್ರಹಿಸಿದ್ದರು. ಅನಂತರ ಅದನ್ನು ಲೇಖನ ರೂಪಕ್ಕಿಳಿಸಿ ಸಂಪಾದಿಸಿ, ಸ್ವಾಮಿ ಅಭಯಾನಂದರಿಗೆ ತೋರಿಸಿದ್ದರು. ಹೀಗೆ ಸಂಪಾದನೆ ಮಾಡಿದ ಸ್ಮೃತಿಕಥೆಯನ್ನು ಅಭಯಾನಂದರು ನೋಡಿ, ಅದಕ್ಕೆ ಅನುಮೋದನೆ ನೀಡಿದ್ದರು. ಈ ಲೇಖನವನ್ನು ಸ್ವಾಮಿ ಪೂರ್ಣಾತ್ಮಾನಂದರು ೧೯೬೧ರಲ್ಲಿ ಸ್ವಾಮಿ ಬುಧಾನಂದರಿಂದ ಸಂಗ್ರಹಿಸಿದ್ದಾರೆ. ಇದರ ಇಂಗ್ಲಿಷ್ ಆವೃತ್ತಿಯನ್ನು ಸ್ವಾಮಿ ಬುಧಾನಂದರು ಸಂಗ್ರಹಿಸಿದ, ನವದೆಹಲಿ ರಾಮಕೃಷ್ಣ ಮಿಷನ್ ಪ್ರಕಟಣೆಯಾದ (ಈಗ ಕೊಲ್ಕತ್ತದ ರಾಮಕೃಷ್ಣ ಇನ್‌ಸ್ಟಿಟ್ಯೂಟ್ ಆಫ್ ಕಲ್ಚರ್ ಪ್ರಕಟಿಸುತ್ತಿದೆ) 'Sri Sarada Devi: The Great Wonder' ಕೃತಿಯಲ್ಲಿ ಪ್ರಕಟಿಸಲಾಗಿದೆ. ಅನಂತರ ಅದು '**ಶತರೂಪೇ ಶಾರದಾ**' ಎಂಬ ಬಂಗಾಳಿ ಗ್ರಂಥದಲ್ಲಿ ಸೇರ್ಪಡೆಯಾಯಿತು.



# ಕಳೆದ ದಿನಗಳ ನೆನಪುಗಳು

(ಸ್ವಾಮಿ ವಿರಜಾನಂದರ ಜೀವನ ಹಾಗೂ ಕೆಲವು ಸಮಕಾಲೀನ ಘಟನೆಗಳು)

ಮೂಲ ಬಂಗಾಳಿ: ಸ್ವಾಮಿ ಶ್ರದ್ಧಾನಂದ

ಅನುವಾದ: ಪ್ರವ್ರಾಜಿಕಾ ಯೋಗಾತ್ಮಪ್ರಾಣಾ

## ಭಾಗ ೨೫

ಬಾಬೂರಾಮ್ ಮಹಾರಾಜರು ತಮ್ಮ ಶರೀರವನ್ನು ತ್ಯಜಿಸಿದ್ದರಿಂದ ಮಠವನ್ನು ನೋಡಿಕೊಳ್ಳುವ ಜವಾಬ್ದಾರಿ ಈಗ ಮಹಾಪುರುಷ ಮಹಾರಾಜರ ಮೇಲಿತ್ತು. ಅವರೀಗ ಮಠಕ್ಕೆ ಬರುತ್ತಿದ್ದ ವಿರಜಾನಂದರರನ್ನು ಕರೆತರಲು ಒಬ್ಬ ಬ್ರಹ್ಮಚಾರಿಯನ್ನು ನಿಲ್ದಾಣಕ್ಕೆ ಕಳುಹಿಸಿದ್ದರು; ಬಂದ ವಿರಜಾನಂದರನ್ನು ಆದರದಿಂದ ಸ್ವಾಗತಿಸಿದರು. ಇವರು ಬರುವ ನಾಲ್ಕು ದಿನ ಮೊದಲೇ ಅವರ ಹಿಂದಿನ ಸ್ನೇಹಿತರೂ ಗುರುಭ್ರಾತರೂ ಆದ ಶುಕುಲ್ ಮಹಾರಾಜ್ (ಆತ್ಮಾನಂದ) ಮಠಕ್ಕೆ ಬಂದಿದ್ದರು. ಬಹಳ ವರ್ಷಗಳ ನಂತರ ಅವರನ್ನು ನೋಡಿ ಬಹಳ ಆನಂದಪಟ್ಟರು. ಶ್ರೀಮಾತೆಯವರು ಆಗ ಅನಾರೋಗ್ಯದ ನಿಮಿತ್ತ ಕೊಲ್ಕತ್ತೆಯಲ್ಲಿದ್ದರು. ಅವರ ದರ್ಶನ ಪಡೆಯಲು ವಿರಜಾನಂದರು 'ಉದ್ಬೋಧನ'ಕ್ಕೆ ಹೋದರು. ಅವರಿಗಾಗಿ ಶ್ಯಾಮಲಾತಾಲ್ ಆಶ್ರಮದಿಂದ ಒಂದು ಶೀಷೆ ಜೇನುತುಪ್ಪವನ್ನು ತೆಗೆದುಕೊಂಡು ಹೋಗಿದ್ದರು. ಬ್ರಹ್ಮಾನಂದರಿಗೆಂದು ಈ ಬಾರಿ ವಿರಜಾನಂದರು ಪಹಾಡಿ ಲಾಠಿಯೊಂದನ್ನು ಒಯ್ದಿದ್ದರು. ಬಲರಾಮ ಮಂದಿರದಲ್ಲಿದ್ದ ಅವರಿಗೆ ಪ್ರಣಾಮ ಮಾಡಿ ಲಾಠಿಯನ್ನು ಕೊಟ್ಟರು. ಅದನ್ನು ನೋಡಿ ಮಹಾರಾಜರು ತುಂಬ ಸಂತೋಷಪಟ್ಟರು. ಬಲರಾಮ ಮಂದಿರದಲ್ಲೇ ಇದ್ದ ಹರಿ ಮಹಾರಾಜರೊಂದಿಗೂ ಭೇಟಿಯಾಯಿತು. ಒಂದು ದಿನ ವಿರಜಾನಂದರು ಕೊಲ್ಕತ್ತೆಯಿಂದ ಮಠಕ್ಕೆ ಹಿಂದಿರುಗುವಾಗ ಟ್ರಾಮ್ ಗಾಡಿಯಲ್ಲಿ ಅವರ ಹಣದ ಚೀಲವು ಜೇಬುಗಳ್ಳರ ಪಾಲಾಯಿತು. ಅದರಲ್ಲಿ ಹೆಚ್ಚೇನೂ ಹಣವಿರಲಿಲ್ಲ, ೩ ರೂಪಾಯಿ, ೩ ಪೈಸೆಗಳು! ಆದದ್ದಾಯಿತೆಂದು ಅವರು ಸ್ಟೀಮರ್ ಘಾಟಿಗೆ ಬಂದು ಬುಕ್ಕಿಂಗ್ ಕ್ಲರ್ಕ್‌ನಿಂದ ಒಂದು ಟಿಕೇಟ್ ಭಿಕ್ಷೆ ಎತ್ತಿ 'ಬಾಲಿ'ಯವರೆಗೆ ಬಂದು, ಅಲ್ಲಿಂದ ಮಠ ಸೇರುವಷ್ಟರಲ್ಲಿ ರಾತ್ರಿ ಬಹಳ ಹೊತ್ತಾಗಿತ್ತು.

ಕೊಲ್ಕತ್ತೆಯಲ್ಲಿ ಸ್ವಲ್ಪ ಕೆಲಸವಿತ್ತು . ಆದ್ದರಿಂದ ವಿರಜಾನಂದರು ಕೆಲವು ದಿನ ತಮ್ಮನಾದ ವಿಜಯ ಕೃಷ್ಣ ಬಸುವಿನ (ಇವರು ಶ್ರೀಮಾತೆಯವರಿಂದ ಮಂತ್ರದೀಕ್ಷೆಯನ್ನು ಪಡೆದಿದ್ದರು ಹಾಗೂ ಸ್ವಾಮೀಜಿಯವರ ಪುಣ್ಯ ಸಂಸರ್ಗಕ್ಕೂ ಬಂದಿದ್ದರು) ಮನೆಯಲ್ಲಿ ತಂಗಿದ್ದರು. ಅವರ ಬಾಲ್ಯ ಸ್ನೇಹಿತರಾದ ಕಾರ್ತಿಕ್, ಶಶಿ, ಯದುಪತಿಯವರುಗಳನ್ನು ಭೇಟಿ ಮಾಡಿದರು. ಶಿವಪುರ ಸಾಧನಾಲಯದ ಭಕ್ತರು ಒಂದು ದಿನ ವಿರಜಾನಂದರನ್ನು ತಮ್ಮಲ್ಲಿಗೆ ಕರೆದೊಯ್ದರು. ಇವರೊಂದಿಗೆ ಸ್ವಾಮಿ ಶುದ್ಧಾನಂದರೂ, ಸ್ವಾಮಿ ವಾಸುದೇವಾನಂದರೂ ಇದ್ದರು. (ಶಿವಪುರ ಸಾಧನಾಲಯವು ವಿರಜಾನಂದರ ಕೊನೆಯ ತಮ್ಮನೂ, ಶ್ರೀಮಾತೆಯವರಿಂದ ದೀಕ್ಷಿತನೂ ಆಗಿದ್ದ ಜೀವನ ಕೃಷ್ಣರಿಂದ ಸ್ಥಾಪಿತವಾದದ್ದು.) ಒಂದು ದಿನ ವಿರಜಾನಂದರು ಮಾಸ್ಟರ್ ಮಹಾಶಯರನ್ನು ಭೇಟಿಯಾಗಿ ಬಂದರು. ಒಬ್ಬ ಭಕ್ತ ದಂತವೈದ್ಯರ ಸಹಾಯದಿಂದ ವಿರಜಾ ನಂದರ ಮೂರು ಹಲ್ಲನ್ನು ತೆಗೆಸಿ ಅದನ್ನು ಕಟ್ಟಿಸುವ ಏರ್ಪಾಟೂ ಆಯಿತು. ಒಂದು ದಿನ ಸ್ಟಾರ್ ಥಿಯೇಟರಿನಲ್ಲಿ 'ಕಿನ್ನರಿ' ಹಾಗೂ 'ಚಂದ್ರಶೇಖರ' ಎಂಬ ನಾಟಕಗಳನ್ನು ನೋಡಿ ಬಂದರು.

ವಿರಜಾನಂದರು ಮಠದಲ್ಲಿ ಎಲ್ಲರಿಂದ ಬೀಳ್ಕೊಂಡು ಕೊಲ್ಕತ್ತೆಯಲ್ಲಿ ಶ್ರೀಮಾತೆ ಮತ್ತು ಸ್ವಾಮಿ ಬ್ರಹ್ಮಾನಂದರಿಗೆ ನಮಸ್ಕರಿಸಿ, ಅವರಿಂದ ಆಶೀರ್ವಾದ ಪಡೆದು ೧೯೧೮ರ ಡಿಸೆಂಬರ್ ೨೧ ರಂದು ಹೊರಟು, ೨೩ರಂದು ಚೆನ್ನೈ ತಲುಪಿದರು. ಇವರನ್ನು ಎದುರುಗೊಳ್ಳಲು ಇಬ್ಬರು ಸಂನ್ಯಾಸಿಗಳೂ ಹಾಗೂ ರಾಮಕೃಷ್ಣ ಮಿಷನ್ ಸ್ಟೂಡೆಂಟ್ಸ್ ಹೋಮಿನ ಕಾರ್ಯದರ್ಶಿಗಳಾದ ರಾಮಸ್ವಾಮಿ ಅಯ್ಯಂಗಾರ್ ಸ್ಟೇಷನ್ನಿಗೆ ಮೋಟಾರ್ ತೆಗೆದುಕೊಂಡು ಹೋಗಿದ್ದರು. ವಿರಜಾನಂದರ ಕೊರಳಿಗೆ ಹೂಮಾಲೆಯನ್ನು ಹಾಕಿ ಸ್ವಾಗತಿಸಿದರು. 'ಹಿಂದೂ' ದಿನಪತ್ರಿಕೆಯು ಇವರ ಆಗಮನದ ಸುದ್ದಿಯನ್ನು ಸಂಕ್ಷಿಪ್ತವಾಗಿ ಪ್ರಕಟಿಸಿತ್ತು. ಅಂದು ಸಂಜೆ ಬಹಳ ಜನರು ಇವರನ್ನು ಕಾಣಲು ಬಂದರು. ಮದ್ರಾಸು ಮಠದ ಸಂನ್ಯಾಸಿ, ಬ್ರಹ್ಮಚಾರಿಗಳು ತೋರಿದ ಶ್ರದ್ಧೋಪಚಾರಗಳಿಂದ ವಿರಜಾನಂದರು ಸುಪ್ರೀತರಾದರು. ಶ್ರೀಮಾತೆಯವರ ಜಯಂತಿ ಹಾಗೂ ಏಸುವಿನ ಉತ್ಸವದಲ್ಲಿ ವಿರಜಾನಂದರ ಉಪಸ್ಥಿತಿಯು ಎಲ್ಲರಿಗೂ ಆನಂದವನ್ನು ತಂದಿತು. ಒಂದು ದಿನ ಪಾರ್ಥಸಾರಥಿಯ ಮಂದಿರಕ್ಕೆ ಹೋಗಿ, ಪೂಜಾದಿಗಳನ್ನು ಮಾಡಿಸಿಕೊಂಡು ಬಂದರು. ಮದ್ರಾಸಿನ ಪ್ರೇಕ್ಷಣೀಯ ಸ್ಥಳಗಳನ್ನೆಲ್ಲ ನೋಡಿಕೊಂಡು ಬ್ರಹ್ಮಚಾರಿ ರುದ್ರಚೈತನ್ಯರ ಜೊತೆ ದಕ್ಷಿಣದ ಪ್ರಸಿದ್ಧ ವೈಷ್ಣವ ತೀರ್ಥವಾದ ತಿರುಪತಿಗೆ ಹೋದರು. ಮಠಾಧಿಪತಿಗಳ ಧರ್ಮಶಾಲೆಯಲ್ಲಿ ತಂಗಿದ್ದರು. ಏಳು ಮೈಲುದ್ದದ ಬೆಟ್ಟದ ಮೆಟ್ಟಿಲುಗಳನ್ನು ಹತ್ತಿ ವೆಂಕಟರಮಣನ ದರ್ಶನ ಹಾಗೂ ಇನ್ನಿತರ ತೀರ್ಥಸ್ಥಾನಗಳ ದರ್ಶನ ಮಾಡಿದರು. ಜೊತೆಗೆ ಒಂದು

ಪರಿಚಯ ಪತ್ರವನ್ನು ಕೊಂಡೊಯ್ದುದರಿಂದ ಇವರನ್ನು ಪಂಡಾಗಳು ತುಂಬ ಉಪಚರಿಸಿದರು.

ತಿರುಪತಿಯಿಂದ ಇಬ್ಬರೂ ಕಾಂಚಿಗೆ ಹೋದರು. ಸ್ವಾಮಿ ಹರಿಹರಾನಂದರು (ವಿಶ್ವರಂಜನ್) ಆಗ ಕಾಂಚಿಯಲ್ಲಿ ತಪಸ್ಯೆಯನ್ನಾಚರಿಸುತ್ತಿದ್ದರು. ಇವರಿಬ್ಬರ ಬರುವಿಕೆಯನ್ನು ತಿಳಿದು ಅವರು ಸ್ಟೇಷನ್ನಿಗೆ ಬಂದು, ಇಬ್ಬರನ್ನೂ ಕರೆದೊಯ್ದರು. ಶಿವ ಕಾಂಚಿ ಹಾಗೂ ವಿಷ್ಣುಕಾಂಚಿಯ ದೇವಸ್ಥಾನಗಳ ವೈಭವಯುತ ಗೋಪುರಗಳನ್ನು ಕಂಡ ವಿರಜಾನಂದರು ತುಂಬ ಸಂತೋಷಪಟ್ಟರು. ಕಾಂಚಿಯಿಂದ ಮದ್ರಾಸಿಗೆ ಹಿಂತಿರುಗಿ ೩-೪ ದಿನಗಳ ನಂತರ ತಿರುಚಿನಾಪಲ್ಲಿಗೆ ಹೊರಟರು. ಅಲ್ಲಿ ಎಸ್. ರಾಮಾನುಜಂ ಅಯ್ಯಂಗಾರ್ ಎಂಬ ವಕೀಲರೊಬ್ಬರ ಅತಿಥಿಯಾಗಿದ್ದರು. ಮದ್ರಾಸು ಮಠದ ಸಂನ್ಯಾಸಿಗಳಾದ ಸ್ವಾಮಿ ಯತೀಶ್ವರಾನಂದರು ಆಗ ಒಂಬತ್ತು ಮೈಲು ದೂರದ ಒಂದೂರಿಗೆ ಕಾರ್ಯನಿಮಿತ್ತ ಹೋಗಿದ್ದರು. ಅಲ್ಲಿಂದ ಹಿಂತಿರುಗಿದ ನಂತರ ವಿರಜಾನಂದರೊಂದಿಗೆ ಎರಡು ದಿನ ಕಳೆದರು. ತಿರುಚಿನಾಪಲ್ಲಿಯಲ್ಲಿದ್ದುಕೊಂಡು ಶ್ರೀರಂಗಂ ಮತ್ತು ಜಂಬುಕೇಶ್ವರವನ್ನು ನೋಡಿಕೊಂಡು ಬಂದರು. ಶ್ರೀರಂಗದಲ್ಲಿ ಶ್ರೀರಂಗನಾಥನು ಪವಡಿಸಿದ ಭವ್ಯ ಮೂರ್ತಿಯನ್ನು ದರ್ಶಿಸಿದ ವಿರಜಾನಂದರಿಗೆ ಹೃದಯ ತುಂಬಿ ಬಂತು. ಈ ಊರಿನಲ್ಲೇ ಸ್ವಾಮೀಜಿಯವರ ಭಕ್ತರಾದ ಶ್ರೀ ಬಾಲ ಸುಬ್ರಹ್ಮಣ್ಯ ಅಯ್ಯರ್ ಅವರನ್ನು ಭೇಟಿಯಾದರು. ತಿರುಚನಾಪಲ್ಲಿಯಿಂದ ವಿರಜಾನಂದರು ಮದುರೈಗೆ ಹೋದರು. ಮದುರೆಯ ಮೀನಾಕ್ಷಿ ದೇವಸ್ಥಾನವು ದಕ್ಷಿಣ ಭಾರತದಲ್ಲೇ ಅತಿದೊಡ್ಡ ದೇವಾಲಯ. ಅದೆಂತಹ ಅದ್ಭುತ ಶಿಲ್ಪ! ಇದನ್ನು ಕಂಡು ವಿರಜಾನಂದರ ವಿಸ್ಮಯಕ್ಕೆ ಪಾರವೇ ಇರಲಿಲ್ಲ.

ವಿರಜಾನಂದರು ಮದುರೈಯಿಂದ ಕೊಲಂಬೋಗೆ ಹೊರಟರು. ಅಲ್ಲಿ 'ನಮಃ ಶಿವಾಯಮ್' ಎಂಬ ಹೆಸರಿನ ಲಕ್ಷಾಧಿಪತಿಯಾದ ಶ್ರೀಮಂತ ಭಕ್ತನೊಬ್ಬನ ಮನೆಯಲ್ಲಿ ಇಳಿದುಕೊಳ್ಳುವ ಏರ್ಪಾಡಾಗಿತ್ತು. ಆತನು ವಿರಜಾನಂದರನ್ನು ತುಂಬ ಗೌರವಾದರಗಳಿಂದ ನೋಡಿಕೊಂಡನು. ಕೊಲಂಬೋದ ವಿವೇಕಾನಂದ ಸೊಸೈಟಿಯು ಆಗತಾನೇ ರೂಪುಗೊಳ್ಳುತ್ತಿತ್ತು. ಅವರ ಆಹ್ವಾನಕ್ಕೆ ಕಟ್ಟುಬಿದ್ದು ವಿರಜಾನಂದರು ಒಂದು ದಿನ ಅಲ್ಲಿ ನೆರೆದಿದ್ದ ೫೦ ಮಂದಿ ಭಕ್ತ-ಬಾಂಧವರನ್ನುದ್ದೇಶಿಸಿ, ಒಂದೂವರೆ ಗಂಟೆಗಳ ಕಾಲ ಆಧ್ಯಾತ್ಮಿಕ ವಿಚಾರಗಳ ಬಗ್ಗೆ ಮಾತನಾಡಿದರು.

ಕೊಲಂಬೋದಿಂದ ವಿರಜಾನಂದರು ಕ್ಯಾಂಡಿ ಹಾಗೂ ಅನುರಾಧಪುರಂ (ಈ ಸ್ಥಳಗಳಿಗೂ ಸ್ವಾಮೀಜಿಯವರು ಭೇಟಿಯಿತ್ತಿದ್ದರು) ನೋಡಿಕೊಂಡು ಧನುಷ್ಕೋಟಿಯ ಮೂಲಕ ರಾಮೇಶ್ವರಕ್ಕೆ ಬಂದರು. ರಾಮೇಶ್ವರನ ದರ್ಶನ ಮಾಡಿಕೊಂಡು ತಿರುವಾಂಕೂರು ಹಾಗೂ ಕನ್ಯಾಕುಮಾರಿಯನ್ನು ನೋಡುವ ಸಲುವಾಗಿ ತಿರುನಲ್ವೇಲಿಯ ಮೂಲಕ ಕೊಲ್ಲಂಗೆ ಬಂದರು. ಅಲ್ಲಿ ರಾಜಾ ಮಹಾರಾಜರ ಶಿಷ್ಯರಾದ ಡಾ. ರಾಮನ್ ಥಂಪಿಯ


ಕನ್ಯಾಕುಮಾರಿಯ ಮಂದಿರ

ಆತಿಥ್ಯವನ್ನು ಸ್ವೀಕರಿಸಿದರು. ಡಾ. ಥಂಪಿಯ ಸೋದರನಾದ ಪದ್ಮನಾಭ ಥಂಪಿಯೂ ಸಹ ಸ್ವಾಮಿ ಬ್ರಹ್ಮಾನಂದರ ಕೃಪೆಗೆ ಪಾತ್ರರಾದವರು. ಈ ಭಕ್ತರಿಬ್ಬರೊಂದಿಗೆ ಮಾತನಾಡಿ ವಿರಜಾನಂದರಿಗೆ ತುಂಬ ಸಂತೋಷವಾಯಿತು. ಕ್ವಿಲನ್‌ನ ಭಕ್ತರು ವಿರಜಾನಂದರ ಸಮಕ್ಷಮದಲ್ಲಿ ಸ್ವಾಮೀಜಿಯವರ ಉತ್ಸವವನ್ನು (೨೩-೧-೧೯೧೯) ನೆರವೇರಿಸಿದರು.

ಕೊಲ್ಲಂನಿಂದ ರೈಲಿನಲ್ಲಿ ತ್ರಿವೇಂಡ್ರಮ್‌ಗೆ, ಅಲ್ಲಿಂದ ಬಸ್ಸಿನಲ್ಲಿ ನಾಗರ್‌ಕೋಯಿಲ್‌ಗೆ ಬಂದು ಉಳಿದ ೧೧.೫ ಮೈಲಿ ದೂರವನ್ನು ಜಟಕಾದಲ್ಲಿ ಕ್ರಮಿಸಿ ಕನ್ಯಾಕುಮಾರಿಯನ್ನು ತಲುಪಿದರು. ನಾಗರ್‌ಕೋಯಿಲ್‌ನ ಸರ್ಕಲ್ ಇನ್ಸ್‌ಪೆಕ್ಟರ್ ಅವರು ವಿರಜಾನಂದರಿಗೆ ಕನ್ಯಾಕುಮಾರಿಯಲ್ಲಿ ಇಳಿದುಕೊಳ್ಳಲು ಒಳ್ಳೆಯ ಏರ್ಪಾಡು ಮಾಡಿದ್ದರು. ಮಂದಿರದ ಪುರೋಹಿತರು ಇವರನ್ನು ಬಹಳ ಗೌರವದಿಂದ ಬರಮಾಡಿಕೊಂಡರು.

ಕನ್ಯಾಕುಮಾರಿ ದೇವಿಯ ಮೂರ್ತಿಯನ್ನು ನೋಡಿ ವಿರಜಾನಂದರು ಮುಗ್ಧರಾದರು. ೧೨-೧೩ ವರ್ಷದ ಹಸನ್ಮುಖಿ ಬಾಲೆಯಂತೆ ಇದ್ದ ಆ ವಿಗ್ರಹವು ಜೀವಂತವಾಗಿಯೂ ಮನೋರಮವಾಗಿಯೂ ಇತ್ತು. ಒಂದೊಂದು ದಿನ ಒಂದೊಂದು ರೀತಿಯ ಅಲಂಕಾರವನ್ನು ಮಾಡುತ್ತಿದ್ದರು. ಶ್ರೀಗಂಧದಿಂದ ಮಾಡಿದ ಅಲಂಕಾರ ಅದ್ಭುತವಾಗಿತ್ತು. ಅಷ್ಟು ಸುಂದರವಾದ ಅಲಂಕಾರವನ್ನು ಅವರು ಇನ್ನೆಲ್ಲೂ ನೋಡಿರಲಿಲ್ಲ. ದೇವಿಯ ವಿಗ್ರಹವು ನೋಡಿದಷ್ಟೂ ಸಾಲದೆಂಬಂತಿತ್ತು. ಕನ್ಯಾಕುಮಾರಿಯಲ್ಲಿರುವಷ್ಟು ದಿನವೂ ವಿರಜಾನಂದರು ದೇವಸ್ಥಾನದಲ್ಲಿ ಜಪ, ಧ್ಯಾನ, ಸ್ತೋತ್ರ ಪಠನಾದಿಗಳನ್ನು ಮಾಡುತ್ತಿದ್ದರು. ಪುರೋಹಿತರು ಇವರನ್ನು ಗರ್ಭಮಂದಿರದೊಳಕ್ಕೆ ಹೋಗಲು ಬಿಟ್ಟಿದ್ದರು. ಇವರು ಇಳಿದುಕೊಂಡಿದ್ದ ಬಂಗಲೆಗೆ ದೇವಸ್ಥಾನದ ಪ್ರಸಾದ ಬರುತ್ತಿತ್ತು. ಅಲ್ಲಿ ರಾಮಸುಬ್ಬ ಅಯ್ಯರ್ ಎಂಬುವರ ಪರಿಚಯವಾಯಿತು. ಸ್ವಾಮಿ ವಿವೇಕಾನಂದರು ಕನ್ಯಾಕುಮಾರಿಗೆ ಹೋಗಿದ್ದಾಗ ಅಯ್ಯರರು ಅಲ್ಲಿದ್ದರು. ಅವರು ಮಾಧವತೀರ್ಥ ಮತ್ತು ಪಿತೃತೀರ್ಥದ

ಹತ್ತಿರ ಸಮುದ್ರದ ನಡುವೆ ಇದ್ದ ಹೆಬ್ಬಂಡೆಯನ್ನು ತೋರಿ, ಅದರ ಮೇಲೆ ಸ್ವಾಮೀಜಿಯವರು ಸತತವಾಗಿ ಮೂರು ದಿನಗಳ ಕಾಲ ಧ್ಯಾನಮಗ್ನರಾಗಿದ್ದನ್ನು ತಾವು ಕಂಡದ್ದಾಗಿ ಹೇಳಿದರು. ಇದನ್ನು ಕೇಳಿದ ವಿರಜಾನಂದರು ಪುಳಕಿತರಾದರು.

ಭಾರತದ ತುತ್ತತುದಿಯ ಭಾಗದ ಆ ಬಂಡೆಯ ಮೇಲೆ ಕುಳಿತಲ್ಲವೇ ವಿವೇಕಾನಂದರು ಪಾಶ್ಚಾತ್ಯ ದೇಶಗಳಿಗೆ ಹೋಗುವ ಸಂಕಲ್ಪವನ್ನು ಕೈಗೊಂಡದ್ದು! ಕನ್ಯಾಕುಮಾರಿಯಿಂದ ತ್ರಿವೇಂಡ್ರಂಗೆ ಹಿಂತಿರುಗುವಾಗ 'ಶುಚೀಂದ್ರಮ್' ಕ್ಷೇತ್ರದಲ್ಲಿ ಇಳಿದು ಅಲ್ಲಿಯ ಪ್ರಸಿದ್ಧ ದೇವಾಲಯವನ್ನು ವೀಕ್ಷಿಸಿದರು. ತ್ರಿವೇಂಡ್ರಂನಲ್ಲಿ ಹೃಷೀಕೇಶ್ ವಂದ್ಯೋಪಾಧ್ಯಾಯರ ಮನೆಯಲ್ಲಿ ಉಳಿದುಕೊಂಡಿದ್ದರು. ಇಲ್ಲಿಯ ಸುಪ್ರಸಿದ್ಧ ಪದ್ಮನಾಭ ದೇವಾಲಯದಲ್ಲಿ ವಿಷ್ಣುವಿನ ಬೃಹತ್ ಪವಡಿತ ಮೂರ್ತಿಯ ದರ್ಶನ ಮಾಡಿದರು.

ತ್ರಿವೇಂಡ್ರಂನಲ್ಲಿ ಆಗ ಹೊಸ ಮಠವನ್ನು ಸ್ಥಾಪಿಸುವ ಪ್ರಸ್ತಾಪ ನಡೆಯುತ್ತಿತ್ತು. ಜಮೀನನ್ನೂ ಕೊಂಡಾಗಿತ್ತು. ಈ ಸ್ಥಳವನ್ನು ಹೃಷೀಕೇಶ ಬಾಬುಗಳು ವಿರಜಾನಂದರಿಗೆ ತೋರಿಸಿಕೊಂಡು ಬಂದರು. ಅಲ್ಲೊಂದು 'ವೇದಾಂತ ಸಮಿತಿ' ಇದ್ದು, ಅದರ ಸದಸ್ಯರು ವಿರಜಾನಂದರ ಸಮಕ್ಷಮದಲ್ಲಿ ಸ್ವಾಮೀಜಿಯವರ ಜನ್ಮೋತ್ಸವವನ್ನು ಆಚರಿಸಿದರು. ತ್ರಿವೇಂಡ್ರಂನಿಂದ ೨೬ ಮೈಲು ದೂರದ ಸಮುದ್ರ ತೀರದಲ್ಲಿದ್ದ ವರ್ಕಲ ಎಂಬ ಸ್ಥಳದಲ್ಲಿಯ ಜನಾರ್ದನ ಸ್ವಾಮಿ ದೇವಾಲಯವನ್ನೂ ಸಂದರ್ಶಿಸಿದರು.

ತ್ರಿವೇಂಡ್ರಂನಿಂದ ಕೊಲ್ಲಂ ಮೂಲಕವಾಗಿ ವಿರಜಾನಂದರು ಆಲೆಪ್ಪಿಗೆ ಬಂದರು. ಅಲ್ಲಿ ಶ್ರೀರಾಮಕೃಷ್ಣರ ಭಕ್ತರು ಅನೇಕರಿದ್ದರು. ಅವರೊಂದಿಗೆ ವಿರಜಾನಂದರು ಆಧ್ಯಾತ್ಮಿಕ ವಿಚಾರಗಳನ್ನು ಮಾತನಾಡಿ, ಅವರಿಗೆಲ್ಲ ಆನಂದವನ್ನು ಉಣಬಡಿಸಿದರು. ಆಲೆಪ್ಪಿಯಲ್ಲಿ ಸ್ಟೀಮರನ್ನು ಹತ್ತಿ ಕೊಚ್ಚಿನ್ ರಾಜ್ಯದ ಮುಖ್ಯ ನಗರವಾದ ಎರ್ನಾಕುಳಮ್ ತಲುಪಿದರು. ಎರ್ನಾಕುಳಮ್ ಹಾಗೂ ಕೊಚ್ಚಿನ್ ನಗರಗಳನ್ನು ನೋಡಿಕೊಂಡು ಶಂಕರಾಚಾರ್ಯರ ಜನ್ಮಸ್ಥಳವಾದ ಕಾಲಡಿಗೆ ಹೋದರು. ಅಲ್ಲಿ ಶಾರದಾಂಬೆಯ ದೇವಾಲಯ ಹಾಗೂ ಶಂಕರಾಚಾರ್ಯರ ಜನ್ಮಸ್ಥಳವನ್ನು ನೋಡಿದರು. ಕಾಲಡಿಯಿಂದ ಬೆಂಗಳೂರಿಗೆ ಬಂದರು. ಮೈಸೂರು ರಾಜ್ಯದ ಈ ಪ್ರಮುಖ ನಗರದಲ್ಲಿ ೧೯೦೪ರಲ್ಲಿ ಸುಂದರವಾದ ಮಠವು ಸ್ಥಾಪಿತವಾಗಿತ್ತು. ಮಠದ ಸಂನ್ಯಾಸಿಗಳು ವಿರಜಾನಂದರನ್ನು ತುಂಬ ಆದರದಿಂದ ಬರಮಾಡಿಕೊಂಡರು. ಅಲ್ಲಿರುವಾಗ ಮೈಸೂರು ರಾಜ್ಯದ ಡೆಪ್ಯುಟಿ ಕಮಿಷನರ್ ಆದ ನಾರಾಯಣ ಅಯ್ಯಂಗಾರರೊಡನೆ[೧] ಭೇಟಿಯಾಯಿತು. ಅವರು ವಿರಜಾನಂದರನ್ನು ತಾವು ಕೆಲಸ ಮಾಡುತ್ತಿದ್ದ ಸ್ಥಳ ಶಿವಮೊಗ್ಗೆಗೆ ಕರೆದರು; ಅಲ್ಲಿಂದ ಭಾರತದಲ್ಲೇ ಅತಿ ದೊಡ್ಡದಾದ ಗೇರುಸೊಪ್ಪೆಯ ಜಲಪಾತವನ್ನು ತೋರಿಸುವ ಏರ್ಪಾಡು ಮಾಡುವುದಾಗಿಯೂ ತಿಳಿಸಿದರು. ವಿರಜಾನಂದರು ಅದಕ್ಕೊಪ್ಪಿ ಅಯ್ಯಂಗಾರರೊಡನೆ ಶಿವಮೊಗ್ಗೆಗೆ ಹೋದರು. ಅವರ ತುಂಬುಹೃದಯದ ಆತಿಥ್ಯೋಪಚಾರದಿಂದ ವಿರಜಾನಂದರು ಸುಪ್ರೀತರಾದರು. ಅಯ್ಯಂಗಾರರು ಸ್ವಾಮಿ ವಿವೇಕಾನಂದರನ್ನು ನೋಡಿದ್ದರು. ಒಮ್ಮೆ ಮಾತನಾಡುತ್ತಿರುವಾಗ ತಾವು ಇನ್ನೆರಡು ವರ್ಷಗಳ ನಂತರ ನಿವೃತ್ತಿ ಪಡೆದು ಮಠವನ್ನು ಸೇರಬೇಕೆಂದಿರುವುದಾಗಿ ತಿಳಿಸಿದರು. ಅವರು ವಿರಜಾನಂದರಿಗೆ ಮೋಟಾರು ಗಾಡಿಯೊಂದನ್ನು ಮಾಡಿಕೊಟ್ಟು, ಗೇರುಸೊಪ್ಪೆ ಜಲಪಾತವನ್ನು ತೋರಿಸಿಕೊಂಡು ಬರುವ ಏರ್ಪಾಟು ಮಾಡಿದರು. ಶರಾವತಿ ನದಿಯು ಎತ್ತರದ ಕಡಿದಾದ ಪರ್ವತಗುಂಟ ಹರಿದು, ಅತಿ ರಭಸದಿಂದ ೧೦೦೦ ಅಡಿ ಪ್ರಪಾತಕ್ಕೆ ಧುಮುಕುತ್ತದೆ. ಆ ದೃಶ್ಯವು ಅದೆಷ್ಟು ರುದ್ರ ಮನೋಹರ! ನದಿಯ ಈ ಪಕ್ಕ ಮೈಸೂರು ರಾಜ್ಯ; ಆ ಪಕ್ಕ ಮುಂಬೈ ಪ್ರದೇಶ. ಎರಡೂ ಕಡೆಯೂ ಪ್ರವಾಸಿ ಮಂದಿರವಿದೆ. ವಿರಜಾನಂದರು ಮೈಸೂರು ರಾಜ್ಯದ ಪ್ರವಾಸಿಮಂದಿರದಲ್ಲಿ ಇಳಿದುಕೊಂಡರು. ದಟ್ಟ ಅಡವಿಯಿಂದ ಆವೃತವಾದ ಆ ಪ್ರದೇಶದ ನದಿ ಹಾಗೂ ಜಲಪಾತದ ಮನೋಹರ ದೃಶ್ಯವನ್ನು ಮನದುಂಬುವವರೆಗೂ ಸವಿದರು! ಈ ರೀತಿಯ ದೃಶ್ಯವನ್ನು ಅವರು ಇನ್ನೆಲ್ಲಿಯೂ ಕಂಡಿರಲಿಲ್ಲ.

ಶಿವಮೊಗ್ಗೆಗೆ ಹಿಂದುರುಗಿದ ವಿರಜಾನಂದರು ಅಯ್ಯಂಗಾರರ ಮನೆಯಲ್ಲಿ ಒಂದು ದಿನ ಉಳಿದುಕೊಂಡು, ಬೆಂಗಳೂರಿಗೆ ಹಿಂದಿರುಗಿದರು. ಬೆಂಗಳೂರಿನ ಮಠದಲ್ಲಿ ಸಾಧುಗಳು ಇವರನ್ನು ಸುಮ್ಮನೆ ಬಿಡಲೊಲ್ಲರು; ವಿಧವಿಧದ ಅಡಿಗೆ ಮಾಡಿ ಬಡಿಸುತ್ತಿದ್ದರು, ಎಲ್ಲ ವಿಧದಲ್ಲೂ ಆದರೋಪಚಾರ ಮಾಡಿದರು. ಬೆಂಗಳೂರು ಅತ್ಯಂತ ಮನೋಹರ ಸ್ಥಳ; ವಿರಜಾನಂದ ಮಹಾರಾಜರಿಗೂ ಬಹಳ ಹಿಡಿಸಿತು. ಎಂಟು ದಿನಗಳನ್ನು ಅಲ್ಲೇ ಕಳೆದರು.

ಬೆಂಗಳೂರಿನಿಂದ ಹೊರಟು ಮುಂಬೈಯನ್ನು ೨೭ನೇ ಫೆಬ್ರವರಿ (೧೯೧೯) ತಲುಪಿದರು. ಅಲ್ಲಿ ಸುಮಾರು ಎರಡು ವಾರಗಳನ್ನು ಕಳೆದರು. ಆರ್. ಕೆ. ಪ್ರಭು ಎಂಬುವರು ಇವರನ್ನು ತುಂಬ ಉಪಚರಿಸಿ, ಮುಂಬೈನ ಪ್ರೇಕ್ಷಣೀಯ ಸ್ಥಳಗಳನ್ನು ತೋರಿಸಿದರು. ಡಾ. ಮೋಫೆ ಎಂಬ ಮುಂಬೈನ ಒಬ್ಬ ವಿಖ್ಯಾತ ದಂತ ಚಿಕಿತ್ಸಕರಿಗೆ ವಿರಜಾನಂದರ ಪರಿಚಯವಾಯಿತು. ಆಗಿನಿಂದಲೂ ಆ ಡಾಕ್ಟರ್ ವಿರಜಾನಂದರ ಭಕ್ತರಾಗಿ ಬಿಟ್ಟರು. ಅವರು ವಿರಜಾನಂದರ ಹಲ್ಲುಗಳನ್ನು ಪರೀಕ್ಷಿಸಿ, ಅಗತ್ಯವಿರುವ ಚಿಕಿತ್ಸೆಯ ವ್ಯವಸ್ಥೆಯನ್ನೂ ಮಾಡಿದರು.[೨] ಒಂದು ದಿನ ಅವರೊಂದಿಗೆ ಹೋಗಿ ವಿಖ್ಯಾತ ಕನ್ಹೇರಿ ಗುಹೆಗಳನ್ನು ನೋಡಿಕೊಂಡು ಬಂದರು.

---

೧ ಇವರು ಶ್ರೀಮಾತೆಯವರಿಂದ ಮಂತ್ರದೀಕ್ಷೆಯನ್ನು ಪಡೆದಿದ್ದರು. ನಂತರ ಮಠವನ್ನು ಸೇರಿ ಸ್ವಾಮಿ ಶ್ರೀವಾಸಾನಂದರಾದರು. ೧೯೪೩ರಲ್ಲಿ ಇವರು ತಮ್ಮ ದೇಹತ್ಯಾಗವನ್ನು ಮಾಡಿದರು.

೨ ಡಾ. ಮೋಫೆಯವರು ವಿರಜಾನಂದರ ಬಗ್ಗೆ ಪ್ರೀತಿ-ಶ್ರದ್ಧೆಯನ್ನು ಕೊನೆಯವರೆಗೂ ಪೋಷಿಸಿಕೊಂಡು ಬಂದಿದ್ದರು. ೧೯೩೯ರಲ್ಲಿ ಅಂದರೆ ಸುಮಾರು ೨೦ ವರ್ಷಗಳ ನಂತರ ವಿರಜಾನಂದರು ಮತ್ತೆ ಮುಂಬೈಗೆ ಹೋದಾಗ ಮೋಫೆಯವರೊಡನೆ ಭೇಟಿಯಾಗಿತ್ತು; ಇಬ್ಬರಿಗೂ ಇದರಿಂದ ಬಹಳ ಸಂತೋಷವಾಗಿತ್ತು. ಆಗ ವಿರಜಾನಂದರು ರಾಮಕೃಷ್ಣ

ಬೆಂಗಳೂರಿನಲ್ಲಿದ್ದಾಗ ವಿರಜಾನಂದರು ತಮ್ಮ ತಾಯಿಯು ಕಠಿಣ ರೋಗಕ್ಕೆ ತುತ್ತಾಗಿರುವ ವಿಷಯವನ್ನು ಕೇಳಿದ್ದರು. ಆದ್ದರಿಂದ ಮುಂಬೈಯಿಂದ ಶ್ಯಾಮಲಾತಾಲಿಗೆ ಹಿಂತಿರುಗುವಾಗ ತಾಯಿಯನ್ನು ನೋಡಲು ಬೃಂದಾವನದಲ್ಲಿ ಇಳಿದರು. ಅಷ್ಟು ಹೊತ್ತಿಗೆ ಅವರ ಆರೋಗ್ಯ ಬಹಳಷ್ಟೇ ಸುಧಾರಿಸಿತ್ತು. ೫-೬ ದಿನಗಳು ಬೃಂದಾವನದಲ್ಲಿ ತಂಗಿದ್ದು, ಮಾರ್ಚ್ ೨೦ ರಂದು ಅಲ್ಲಿಂದ ಶ್ಯಾಮಲಾತಾಲಿಗೆ ಹೊರಟು, ಮಾರನೇ ದಿನ ರಾತ್ರಿ ಹತ್ತು ಗಂಟೆಗೆ ಆಶ್ರಮವನ್ನು ತಲುಪಿದರು. ಅವರು ಅಲ್ಲಿಂದ ಹೊರಟು ಆಗಲೇ ಐದು ತಿಂಗಳುಗಳು ಉರುಳಿದ್ದವು. ಶರೀರ ಬಹಳ ಬಳಲಿತ್ತು. ಎರಡು ದಿನಗಳ ಪೂರ್ಣ ವಿಶ್ರಾಂತಿಯನ್ನು ಪಡೆದರು. ತೀರ್ಥಯಾತ್ರೆಯ ನೆನಪಿನಲ್ಲಿ ಆಶ್ರಮವಾಸಿಗಳಿಗೆಲ್ಲ ಒಂದು ದಿನ ಭಂಡಾರ (ಭೂರಿ ಭೋಜನ) ಮಾಡಿಸಿದರು.

ವಿರಜಾನಂದರು ಮಠದ ಹಿರಿಯ ಸಂನ್ಯಾಸಿಗಳೊಬ್ಬರಿಗೆ ಬರೆದ ಪತ್ರದಿಂದ ಅವರ ದಕ್ಷಿಣ ಭಾರತದ ತೀರ್ಥಯಾತ್ರೆ ಮತ್ತು ಅದರಿಂದ ಅವರಿಗಾದ ಆನಂದದ ಪರಿಚಯವಾಗುವುದು:

ಶ್ಯಾಮಲಾತಾಲ್
ಪೋ: ಟನಕ್‌ಪುರ್
೧೨ಮೇ, ೧೯೧೯

''ಪ್ರೀತಿಯ......,

''...ಹಾ! ಈ ಸಲ ಇಡೀ ಭಾರತವನ್ನೇ ಸುತ್ತಿ ಬಂದೆ! ಇಲ್ಲಿಂದ ಹೊರಟು ಬೃಂದಾವನ, ಪ್ರಯಾಗ, ಕಾಶಿಯ ಮೂಲಕ ಮಠಕ್ಕೆ ಹೋದೆ. ಅಲ್ಲಿಂದ ಮದ್ರಾಸು, ತಿರುಪತಿ, ಶಿವಕಂಚಿ, ವಿಷ್ಣುಕಂಚಿ, ಶ್ರೀರಂಗಮ್, ತಿರುಚಿನಾಪಲ್ಲಿ, ಮದುರೆಯನ್ನು ನೋಡಿಕೊಂಡು, ಶ್ರೀಲಂಕೆಯ ಕ್ಯಾಂಡಿ, ಅನುರಾಧಪುರಂಗೆ ಹೋಗಿ ಅಲ್ಲಿಂದ ರಾಮೇಶ್ವರ ಕ್ಷೇತ್ರವನ್ನು ಸಂದರ್ಶಿಸಿ, ಕೊಲ್ಲಂ, ತ್ರಿವೇಂಡ್ರಂ ನೋಡಿಕೊಂಡು ಕನ್ಯಾಕುಮಾರಿಯ ದರ್ಶನ ಮುಗಿಸಿಕೊಂಡು ಆಲೆಪ್ಪಿ, ಕೊಚ್ಚಿನ್ ಮೂಲಕ ಶಂಕರಾಚಾರ್ಯರ ಜನ್ಮಭೂಮಿಯಾದ ಕಾಲಡಿಯನ್ನು ನೋಡಿಕೊಂಡು ಬೆಂಗಳೂರಿಗೆ ಹೋದೆ. ಅಲ್ಲಿಂದ Jog Falls (ಗೇರುಸೊಪ್ಪೆ ಜಲಪಾತ) ನೋಡಿಕೊಂಡು ಮುಂಬೈ ಮೂಲಕ ಬೃಂದಾವನಕ್ಕೆ ಹೋಗಿ ನಂತರ ಇಲ್ಲಿಗೆ ಬಂದೆ. ಬಂದು ಒಂದೂವರೆ ತಿಂಗಳಾಯಿತು. ಈ ತೀರ್ಥಯಾತ್ರೆಗೆ ೫ ತಿಂಗಳು ಹಿಡಿಯಿತು, ಅದೂ ಅವಸರವಸರವಾಗಿ ಮುಗಿಸಿ. ಅಲ್ಲಿಯ ಅದ್ಭುತ ಮನೋಹರವಾದ ಸ್ಥಳಗಳನ್ನಾಗಲಿ, ವಿಗ್ರಹಗಳನ್ನಾಗಲಿ ಪತ್ರದಲ್ಲಿ ವರ್ಣಿಸಿ ತಿಳಿಸಲಸಾಧ್ಯ. ಈ ಸ್ಥಳಗಳಲ್ಲೆಲ್ಲ ಸುತ್ತಾಡಿ ಆರೋಗ್ಯವೂ ಸುಧಾರಿಸಿದೆ. ಎಲ್ಲೆಡೆಯೂ ಶ್ರೀರಾಮಕೃಷ್ಣರ, ಶಾರದಾದೇವಿಯವರ ಹಾಗೂ ಸ್ವಾಮೀಜಿಯವರ ಭಕ್ತರೆ; ಅದೇನು ಅವರ ಆದರಾತಿಥ್ಯ!...

''ಇಲ್ಲೀಗ ಕೆಲವು ತಿಂಗಳಿಂದ ಕೆಲಸದವರಾಗಲಿ, ಅಡಿಗೆಯವರಾಗಲಿ, ಮಾಲಿಯಾಗಲಿ ಇಲ್ಲ. ನಾವೇ ಎಲ್ಲವನ್ನೂ ಮಾಡಿಕೊಳ್ಳಬೇಕಾದ್ದರಿಂದ ಕಷ್ಟವೇ ಆಗಿದೆ. ನನ್ನೊಂದಿಗೆ ಒಬ್ಬ ಬ್ರಹ್ಮಚಾರಿ ಇದ್ದಾನೆ. ಅವನು ಎಲ್ಲ ಕೆಲಸಗಳಲ್ಲೂ ಸಹಾಯ ಮಾಡುತ್ತಾನೆ. ನಾವಿಬ್ಬರೂ ಚೆನ್ನಾಗಿದ್ದೇವೆ...''

ಅವರ ಈ ಪತ್ರದಿಂದ ತಿಳಿದುಬರುವುದೇನೆಂದರೆ, ದಕ್ಷಿಣ ಭಾರತದ ತೀರ್ಥಯಾತ್ರೆಯಿಂದ ಅವರ ಆರೋಗ್ಯವು ಸುಧಾರಿಸಿತ್ತು. ಆದರೆ ಶ್ಯಾಮಲಾತಾಲಿಗೆ ಹಿಂತಿರುಗಿ ಬಂದಾಗ ಕೆಲಸದವರಾಗಲಿ, ಅಡಿಗೆಯವರಾಗಲಿ, ಮಾಲಿಯಾಗಲಿ ಇಲ್ಲದ್ದರಿಂದ ತುಂಬ ಕಷ್ಟಪಡಬೇಕಾಯಿತು. ಬ್ರಹ್ಮಚಾರಿ ನರೇನ್ ತುಂಬ ಮುತುವರ್ಜಿ ವಹಿಸಿ ಕೆಲಸ ಮಾಡುತ್ತಿದ್ದ. ಆದರೆ ಕೆಲವು ತಿಂಗಳುಗಳಲ್ಲಿ ಅವನಿಗೂ ತ್ರಾಸವೆನಿಸತೊಡಗಿತು. ಕೆಲ ದಿನಗಳ ರಜೆ ಕೇಳಿದನು. ಎಷ್ಟೇ ತೊಂದರೆಗಳಿದ್ದರೂ ಸಹ ವಿರಜಾನಂದರು ಯಾರನ್ನೂ ಬಲವಂತವಾಗಿ ತಮ್ಮ ಬಳಿಯಲ್ಲಿ ಇರಿಸಿಕೊಳ್ಳುವ ಸ್ವಭಾವದವರಾಗಿರಲಿಲ್ಲ. ಹಿಂದೊಮ್ಮೆ ಹೀಗೆಯೇ ಬ್ರಹ್ಮಚಾರಿ ಸೀತಾರಾಮನಿಗೂ ಸಹ ಸಂತೋಷದಿಂದಲೇ ವಿರಾಮವನ್ನಿತ್ತಿದ್ದರು. ಈಗ ನರೇನ್‌ಗೂ ರಜೆ ನೀಡಿದರು. ೧೯೧೯ರ ಡಿಸೆಂಬರ್‌ನಲ್ಲಿ ಹೊರಟ ನರೇನ್ ಹರಿದ್ವಾರ, ಕಾಶ್ಮೀರ ಮುಂತಾದ ಸ್ಥಳಗಳನ್ನು ನೋಡಿಕೊಂಡು ಸುಮಾರು ಹತ್ತು ತಿಂಗಳ ನಂತರ ಹಿಂದಿರುಗಿದನು. ಈ ಹತ್ತು ತಿಂಗಳು ಮಿತವ್ಯಯಿ ವಿರಜಾನಂದರು ಒಬ್ಬರೇ ಆಶ್ರಮದಲ್ಲಿದ್ದರು. ಅವರೇ ಅಡಿಗೆ, ತೋಟ ಮತ್ತು ಆಶ್ರಮದ ಮತ್ತಿತರ ಕೆಲಸಗಳನ್ನು ಮಾಡುತ್ತಿದ್ದರು. ತಮ್ಮ ಜಪ-ಧ್ಯಾನ ಸ್ವಾಧ್ಯಾಯಗಳಂತೂ ಇದ್ದೇ ಇತ್ತು. ಅಷ್ಟೇ ಅಲ್ಲದೆ ಬೇರೆಡೆಗಳಿಂದ ಸಾಧು ಬ್ರಹ್ಮಚಾರಿಗಳು ಅತಿಥಿಗಳಾಗಿ ಬಂದಾಗ ಅವರ ಆದರೋಪಚಾರವನ್ನು ಬಹಳವಾಗಿ ಮಾಡುತ್ತಿದ್ದರು. ದೃಢವಾದ ಆತ್ಮನಿಷ್ಠೆ, ಎದೆಗುಂದದ ಕರ್ಮನಿಷ್ಠೆ ಮತ್ತು ಯಾವುದಕ್ಕೂ ಕುಂಠಿತವಾಗದ ಸ್ವಾವಲಂಬನೆ — ಇವು ಅವರ ಸ್ವಭಾವದ ವೈಶಿಷ್ಟ್ಯವಾಗಿತ್ತು. ೧೯೨೦ರ ಜನವರಿ ೧ರಂದು ವಿರಜಾನಂದರು ತಮ್ಮ ದಿನಚರಿಯಲ್ಲಿ ಹೀಗೆಂದು ಬರೆದಿದ್ದಾರೆ: " May the new year bring me peace and Realization Supreme!" ('ಹೊಸ ವರ್ಷವು ನನಗೆ ಶಾಂತಿ ಮತ್ತು ಚರಮಸತ್ಯದ ಸಾಕ್ಷಾತ್ಕಾರವನ್ನು ತಂದುಕೊಡಲಿ').

*(ಮುಂದುವರಿಯುವುದು)*

---

ಮಠ ಮತ್ತು ಮಿಷನ್ನಿನ ಅಧ್ಯಕ್ಷರು. ಅವರ ದರ್ಶನಕ್ಕಾಗಿ ಯಾವಾಗಲೂ ಜನಜಂಗುಳಿ ಇದ್ದೇ ಇರುತ್ತಿತ್ತು. ಡಾ. ಮೋಘೆ ಸ್ವಲ್ಪ ಸಂಕೋಚದ ಸ್ವಭಾವದವರು. ಅಷ್ಟು ಜನರ ಮಧ್ಯೆ ಬರಲು ಹಿಂಜರಿಯುತ್ತಿದ್ದರು. ಅವರ ಮನೆ ಮುಂಬೈ ಮಠಕ್ಕೆ ಹತ್ತಿರವೇ ಇತ್ತು. ವಿರಜಾನಂದರು ಕೆಲವೊಮ್ಮೆ ಅವರನ್ನು ಕರೆಸುತ್ತಿದ್ದರು. ಒಂದು ದಿನ ಅವರ ಮನೆಗೂ ಕ್ಲಿನಿಕ್ಕಿಗೂ ಹೋಗಿದ್ದರು. ಮೋಘೆಯವರು ವಿರಜಾನಂದರನ್ನು ಒಂದು ಒಳ್ಳೆಯ ಸ್ಟುಡಿಯೋಗೆ ಕರೆದೊಯ್ದು ಕೆಲವು ಛಾಯಾಚಿತ್ರಗಳನ್ನು ತೆಗೆಸಿದ್ದರು. ೧೯೪೭ರ ಜನವರಿಯಲ್ಲಿ ಮೂರನೇ ಬಾರಿಗೆ ವಿರಜಾನಂದರು ಮುಂಬೈಗೆ ಹೋಗಿದ್ದಾಗಲೂ ಸಹ ಮೋಘೆಯವರೊಂದಿಗೆ ಅವರ ಭೇಟಿಯಾಗಿತ್ತು.

# ಶ್ರೀಮಾತೆಯವರ ಪತ್ರಗಳು – ೧೬

ಅನುವಾದ: ಪ್ರವ್ರಾಜಿಕಾ ಧರ್ಮಪ್ರಾಣಾ

### ಪತ್ರ – ೮೭

೨೧.೪.೧೯೧೩
೬ನೇ ವೈಶಾಖ, ಜಯರಾಂಬಾಟಿ

ಶುಭವಾಗಲಿ,

ತಾಯಿ, ನಿನ್ನ ಪತ್ರವು ಸಿಕ್ಕಿ ಸಮಾಧಾನವಾಯಿತು. ಇಲ್ಲಿ ನಾವೆಲ್ಲರೂ ಸದ್ಯ ಚೆನ್ನಾಗಿದ್ದೇವೆ. ೨೬ನೇ ವೈಶಾಖ ಅಕ್ಷಯ ತೃತೀಯ ದಿನದಂದು ರಾಧುವನ್ನು ತಾಜ್‌ಪುರ್‌ಗೆ ಕಳುಹಿಸುವ ಇಚ್ಛೆ ಇದೆ. ಮಾಕುವೂ ತಾಜ್‌ಪುರ್‌ಗೆ ಹೋಗಿದ್ದಾಳೆ. ನಿನಗೆ ನನ್ನ ಆಶೀರ್ವಾದ, ಕ್ಷೇಮದಲ್ಲಿರುವೆ ಎಂದು ಆಶಿಸುತ್ತೇನೆ.

ಇತಿ ಆಶೀರ್ವಾದ ನೀಡುತ್ತಿರುವ
ನಿನ್ನ ಮಾತೆ

***ಪತ್ರ ಪಡೆದವರ ಹೆಸರು ಮತ್ತು ವಿಳಾಸ***

*ಶ್ರೀಮತಿ ಸರಯೂಬಾಲಾ ದೇವಿ*
*C/O Dr.G.C.Sen*
*P.O. Meherpur , Dt. Nadia*

### ಪತ್ರ – ೮೮

೨.೫.೧೯೧೩
೧೯ನೇ ವೈಶಾಖ, ಜಯರಾಂಬಾಟಿ

ಮಂಗಳವಾಗಲಿ,

ತಾಯಿ, ನಿನ್ನ ಪತ್ರವು ಸಿಕ್ಕಿದೆ. ಸದ್ಯ ಇಲ್ಲಿ ಎಲ್ಲವೂ ಕ್ಷೇಮ. ಈ ತಿಂಗಳು ೨೪ನೇ ತಾರೀಖಿಗೆ ಭೂದೇವನ ವಿವಾಹ ನಡೆಯಲಿದೆ. ನಿಮಗೆಲ್ಲರಿಗೂ ನನ್ನ ಆಶೀರ್ವಾದ.

ಇತಿ ಆಶೀರ್ವಾದ ನೀಡುತ್ತಿರುವ
ನಿನ್ನ ಮಾತೆ

***ಪತ್ರ ಪಡೆದವರ ಹೆಸರು ಮತ್ತು ವಿಳಾಸ***

*ಶ್ರೀಮತಿ ಸರಯೂಬಾಲಾ ದೇವಿ*
*C/O Dr. G.C. Sen*
*P.O.Meherpur, Dt.Nadia*

### ಪತ್ರ – ೮೯

೭.೫.೧೯೧೩
೨೪ನೇ ವೈಶಾಖ, ಜಯರಾಂಬಾಟಿ

ಶುಭವಾಗಲಿ,

ಮಗನೆ, ನಿನ್ನ ಪತ್ರವು ಸಿಕ್ಕಿ ಸಮಾಧಾನವಾಯಿತು. ಸದ್ಯ ನಾನು ಚೆನ್ನಾಗಿದ್ದೇನೆ. ಶ್ರೀ ಶ್ರೀ ಠಾಕೂರರನ್ನು ಕರೆಯಬೇಕು. ಅವರ ಕೃಪೆಯಿಂದ ಕ್ರಮೇಣ ಮನಸ್ಸು ಶುದ್ಧಿಯಾಗುವುದು. ತಕ್ಷಣ ಏನಾದರೂ ಆಗುವುದೆ! ಎಷ್ಟೊಂದು ಋಷಿ ಮುನಿಗಳು ಜೀವನ ಪೂರ್ತಿ ಸಾಧನೆ – ತಪಸ್ಸು ಮಾಡುವರು, ಅವರ ಮನಸ್ಸೂ ಕೆಲವು ಸಂಧರ್ಭಗಳಲ್ಲಿ ಸಡಿಲವಾಗಿ ಕೆಳಗಿಳಿಯುವುದು! ಆದುದರಿಂದ ಸಾಧನೆ ಮಾಡಬೇಕು. ಯಾರು ಎಷ್ಟು ಭಗವಂತನ ಸಾಧನೆ ಮಾಡುವರೋ ಅವರು ಅಷ್ಟೇ ಶೀಘ್ರವಾಗಿ ಶುದ್ಧ ವಸ್ತು ವನ್ನು ಪಡೆಯುವರು. ವ್ಯಾಕುಲದಿಂದ ಅತ್ತರೆ ಮಾತ್ರ ತಾನೇ, ಮನಸ್ಸು ಚೆನ್ನಾಗಾಗುವುದು? ಶ್ರೀ ಠಾಕೂರರ ಕೃಪೆಗೆ ಪಾತ್ರರಾಗಲು ಎಲ್ಲರೂ ಸಮಾನರು! ಸಾಧನೆ ಬೇಕು.

ನಿನಗೆ ನನ್ನ ಆಶೀರ್ವಾದ.

ಇತಿ ಆಶೀರ್ವಾದ ನೀಡುತ್ತಿರುವ
ನಿನ್ನ ಮಾತೆ

***ಪತ್ರ ಪಡೆದವರ ಹೆಸರು ಮತ್ತು ವಿಳಾಸ***

*Sriman Nishi Kumar Ganguly*
*Ibrahimpur (Tipprah )*

### ಪತ್ರ – ೯೦

೧೩.೫.೧೯೧೩
೨೮ನೇ ವೈಶಾಖ, ಜಯರಾಂಬಾಟಿ

ಮಂಗಳವಾಗಲಿ,

ತಾಯಿ, ನಿನ್ನ ಪತ್ರ ಹಾಗೂ ಕಳುಹಿಸಿರುವ ೫ ರೂಪಾಯಿ ಸಿಕ್ಕಿ ಸಂತೋಷವಾಯಿತು. ಇಲ್ಲಿ ನಾವೆಲ್ಲರೂ ಚೆನ್ನಾಗಿದ್ದೇವೆ. ೨೪ನೇ ವೈಶಾಖದಂದು ಭೂದೇವನ ವಿವಾಹ ನಡೆಯಿತು. ಮತ್ತು ೨೬ನೇ ತಾರೀಖಿಗೆ ರಾಧು ಮಾವನ ಮನೆಗೆ ಹೋಗಿದ್ದಾಳೆ. ನಿನಗೆ ನನ್ನ ಆಶೀರ್ವಾದಗಳು. ಎರಡು ದಿನಗಳ ಹಿಂದೆ ಶೋಕ ಹರಣ ಕಳುಹಿಸಿರುವ ೫ ರೂಪಾಯಿ ಸಿಕ್ಕಿತು. ಅವನಿಗೆ ನನ್ನ ಆಶೀರ್ವಾದ ತಿಳಿಸು ಮತ್ತು ಇಲ್ಲಿ ಎಲ್ಲವೂ ಕ್ಷೇಮವೆಂದು ಹೇಳು.

ಇತಿ ಆಶೀರ್ವಾದ ನೀಡುತ್ತಿರುವ
ನಿನ್ನ ಮಾತೆ

***ಪತ್ರ ಪಡೆದವರ ಹೆಸರು ಮತ್ತು ವಿಳಾಸ***

*ಸರಯೂಬಾಲಾ ದೇವಿ*
*25 kankulia Road, Calcatta*

*Note:* ಶೋಕಹರಣ ಶ್ರೀಮಾತೆಯವರ ಮಂತ್ರ ಶಿಷ್ಯ. ಹಾಗೂ ಸರಯೂಬಾಲಾ ದೇವಿಯವರ ಸಹೋದರಿಯ ಪತಿ.

## ಪತ್ರ - ೯೧

೨೪.೫.೧೯೧೩
೧೧ನೇ ಜ್ಯೇಷ್ಠ, ಜಯರಾಂಬಾಟಿ

ಮಂಗಳವಾಗಲಿ,

ತಾಯಿ, ನಿನ್ನ ಪತ್ರವು ಸಿಕ್ಕಿ ಸಂತೋಷವಾಯಿತು. ರಾಧು ಕಾಯಿಲೆ ಇಟ್ಟು ಕೊಂಡೇ ನಿಶ್ಚಿತವಾದ ದಿನದಂತೆ ತಾಜ್‌ಪುರ್‌ಗೆ ಹೋಗಿದ್ದಳು. ಅಲ್ಲಿ ಕಾಯಿಲೆ ಜಾಸ್ತಿಯಾಗಿ ಮೂರು ದಿನಗಳ ನಂತರ ಮರಳಿ ಬಂದಳು. ಆಮೇಲೆ ೧೪, ೧೫ ದಿನಗಳು ಜ್ವರ, ಎದೆ, ಹೊಟ್ಟೆ ನೋವು, ಒಂದು ಹುಣ್ಣು ಆಗಿ ಅದರ ನೋವು ಎಲ್ಲಾ ಆಗಿ, ಈಗ ಸದ್ಯ ಸ್ವಲ್ಪ ಚೆನ್ನಾಗಿದ್ದಾಳೆ. ಈಗಲೂ ಸ್ವಲ್ಪ ಸ್ವಲ್ಪ ಜ್ವರ ಬರುತ್ತಿದೆ. ೨, ೩ ದಿನಗಳ ಅಂತರದಲ್ಲಿ ಅನ್ನ ಕೊಡುತ್ತಿರುವುದು. ತುಂಬಾ ದುರ್ಬಲಳಾಗಿದ್ದಾಳೆ. ಉಳಿದಂತೆ ಎಲ್ಲವೂ ಕುಶಲ. ನಾನು ಸ್ವಲ್ಪ ಮಟ್ಟಿಗೆ ಚೆನ್ನಾಗಿದ್ದೇನೆ. ನಿನಗೆ ನನ್ನ ಆಶೀರ್ವಾದ. ಮಳೆಗಾಲದಲ್ಲಿ ಮಲೇರಿಯಾ ನಾಡಿನಲ್ಲಿ ವಾಸ ಮಾಡದಿರುವುದು ಒಳ್ಳೆಯದು, ವಿಶೇಷವಾಗಿ ಅಲ್ಲಿ ವಾಸ ಮಾಡಿ ಅಭ್ಯಾಸ ಇಲ್ಲದಿರುವವರು.

ಇತಿ ಆಶೀರ್ವಾದ ನೀಡುತ್ತಿರುವ
ನಿನ್ನ ಮಾತೆ

ಸುರೇಂದ್ರನಿಗೆ ಹೇಳು, ರಾಮದಾಸನ ಬಳಿ ಹೋಗುವ ಆವಶ್ಯಕತೆ ಇಲ್ಲ. ಅಮಲ್ ಮನೆಗೆ ಬಂದಿದ್ದಾನೆ.

*ಪತ್ರ ಪಡೆದವರ ಹೆಸರು ಮತ್ತು ವಿಳಾಸ*
*ಶ್ರೀಮತಿ ಸರಯೂ ಬಾಲಾ ದೇವಿ*
*25 Kankulia Road ,Ballyganje , Calcatta*

## ಪತ್ರ - ೯೨

ಶ್ರೀ ಗುರು ಶರಣಂ

೫ .೬ .೧೯೧೩
ಜಯರಾಂ ಬಾಟಿ, ೨೧ನೇ ಜ್ಯೇಷ್ಠ

ಶುಭವಾಗಲಿ,

ತಾಯಿ ನಿನ್ನ ಪತ್ರವು ಸಿಕ್ಕಿದೆ.

ರಾಧುವಿಗೆ ಈಗಲೂ ಮಧ್ಯೆ ಮಧ್ಯೆ ಸ್ವಲ್ಪ ನೋವು ಬರುತ್ತಿದೆ. ಬೇರೆ ಎಲ್ಲಾ ಕ್ಷೇಮ. ಇಂದಿಗೆ ೫, ೬ ದಿನಗಳಿಂದ ನನಗೆ ನೆಗಡಿಯಾಗಿದೆ. ಅದಲ್ಲದೆ ಚೆನ್ನಾಗಿದ್ದೇನೆ. ನಿನಗೆ ನನ್ನ ಆಶೀರ್ವಾದ. ನಿನ್ನ ಕ್ಷೇಮದ ಬಗ್ಗೆ ಬರೆದು ಸಮಾಧಾನ ಕೊಡಬೇಕು.

ಇತಿ ಆಶೀರ್ವಾದ ನೀಡುತ್ತಿರುವ
ನಿನ್ನ ಮಾತೆ

*ಪತ್ರ ಪಡೆದವರ ಹೆಸರು ಮತ್ತು ವಿಳಾಸ*
*ಶ್ರೀಮತಿ ಸರಯೂ ಬಾಲಾ ದೇವಿ*
*25, Kankulia Road*
*Ballyganje, Calcatta*

## ಪತ್ರ - ೯೩

೧೫.೬.೧೯೧೩
೨೦ನೇ ಜ್ಯೇಷ್ಠ

ಶುಭವಾಗಲಿ,

ಮಗೂ, ನೀನು ಕಳುಹಿಸಿರುವ ೧೦ ರೂಪಾಯಿ ಸಿಕ್ಕಿ ಸಂತೋಷವಾಯಿತು. ನಿನಗೆ ನನ್ನ ಆಶೀರ್ವಾದ ಹಾಗೂ ಸೊಸೆ ಮತ್ತು ಮಕ್ಕಳಿಗೂ ತಿಳಿಸು. ನಾನು ಸದ್ಯ ಚೆನ್ನಾಗಿದ್ದೇನೆ. ನೀವೆಲ್ಲರೂ ಚೆನ್ನಾಗಿದ್ದೀರೆಂದು ಆಶಿಸುತ್ತೇನೆ.

ಇತಿ ಆಶೀರ್ವಾದ ನೀಡುತ್ತಿರುವ
ನಿನ್ನ ಮಾತೆ

*ಪತ್ರ ಪಡೆದವರ ಹೆಸರು ಮತ್ತು ವಿಳಾಸ*
*Sj.Taraknath Roy Chowdhury*
*SubRegistrar, Kathiadi*
*Mymensingh*

## ಪತ್ರ - ೯೪

೧೫.೬.೧೯೧೩
೩೦.೨.೨೦ (ಬಂಗಾಳಿ ತಾರೀಖು)
ಜಯರಾಂಬಾಟಿ

ಮಂಗಳವಾಗಲಿ,

ತಾಯಿ, ನಿನ್ನ ಪತ್ರವು ಸಿಕ್ಕಿ ಸಮಾಧಾನವಾಯಿತು. ಸದ್ಯ ನನ್ನ ನೆಗಡಿ ಕಡಿಮೆಯಾಗಿದೆ. ಕಿವಿಯಲ್ಲಿ ಈಗಲೂ ಸ್ವಲ್ಪ ಭಾರವೆನಿಸುತ್ತಿದೆ. ರಾಧುವಿಗೆ ೨,೩ ದಿನಗಳ ಅಂತರದಲ್ಲಿ ಸಾಮಾನ್ಯವಾಗಿ ನೋವು ಬರುತ್ತಿದೆ. ಈ ಸಲವಂತೂ ಬಂದು ಬಹುದಿನಗಳಿಂದ ಕಷ್ಟ ಪಡುತ್ತಿದ್ದಾಳೆ. ಠಾಕೂರ್ ಹೇಗೆ ನಡೆಸುತ್ತಾರೋ ಹಾಗೆಯೇ ನಡೆಯುವುದು. ನಿನಗೆ ನನ್ನ ಆಶೀರ್ವಾದ. ಶೋಕಹರಣನಿಗೆ ನನ್ನ ಆಶೀರ್ವಾದ ತಿಳಿಸು. ಅವನು ಕಳುಹಿಸಿರುವ ೫ ರೂಪಾಯಿ ಸಿಕ್ಕಿದೆ ಎಂದು ಹೇಳು.

ಈ ಊರಲ್ಲೂ ಎಡೆಬಿಡದೆ ಮಳೆ ಸುರಿಯುತ್ತಿದೆ, ಶ್ರಾವಣ – ಭಾದ್ರಪದ ತಿಂಗಳುಗಳಂತೆ. ಊರಿನ ಸ್ಥಿತಿ ಪರವಾಗಿಲ್ಲ. ಮಲೇರಿಯಾ ಈಗಲೂ ಕಾಣಿಸಿಕೊಂಡಿಲ್ಲ. ಮನೆಯಲ್ಲಿ ಎಲ್ಲವೂ ಕ್ಷೇಮ. ನಿಮ್ಮೆಲ್ಲರ ಕ್ಷೇಮಕ್ಕಾಗಿ ಪ್ರಾರ್ಥನೆ.

ಇತಿ ಆಶೀರ್ವಾದ ನೀಡುತ್ತಿರುವ
ನಿನ್ನ ಮಾತೆ

*ಪತ್ರ ಪಡೆದವರ ಹೆಸರು*
*ಸರಯೂಬಾಲಾ ದೇವಿ*

# ದುಃಖ ಮತ್ತು ದುಃಖನಿವೃತ್ತಿಯ ಉಪಾಯ

ಮೂಲ ಹಿಂದೀ : **ಸ್ವಾಮಿ ಬ್ರಹ್ಮೇಶಾನಂದ** ಅನುವಾದ : **ಮಾತಾ ತ್ಯಾಗಮಯೀ**

ಮೂಲ ಹಿಂದಿಯಲ್ಲಿ ರಚಿತವಾದ **'ಆನಂದ್ ಕೀ ಖೋಜ್'** ಎಂಬ ಗ್ರಂಥದ ಎರಡನೆಯ ಲೇಖನವಿದು. ಈ ಗ್ರಂಥದ ಲೇಖನಗಳ ಅನುವಾದವನ್ನು ಸರಣಿಯಾಗಿ ಪ್ರಕಟಿಸುತ್ತಿದ್ದೇವೆ. ಲೇಖಕರು 'ವೇದಾಂತ ಕೇಸರಿ'ಯ ಸಂಪಾದಕರಾಗಿಯೂ ಮುಂದೆ ಚಂಡೀಗಢ ರಾಮಕೃಷ್ಣ ಮಿಷನ್ ಆಶ್ರಮದ ಕಾರ್ಯದರ್ಶಿಯಾಗಿಯೂ ಸೇವೆ ಸಲ್ಲಿಸಿ, ಪ್ರಸ್ತುತ ವಾರಣಾಸಿ ಸೇವಾಶ್ರಮದಲ್ಲಿ ವಿಶ್ರಾಂತ ಜೀವನ ನಡೆಸುತ್ತಿದ್ದಾರೆ. ಅನುವಾದಕರು ಚಳ್ಳಕೆರೆ ಶ್ರೀಶಾರದಾಶ್ರಮದ ಮುಖ್ಯಸ್ಥರಾಗಿದ್ದಾರೆ.

## ಭಾಗ ೧

**ದುಃ**ಖ ಜಗತ್ತಿನ ಸತ್ಯ. ದುಃಖ ಎಲ್ಲರಿಗೂ ಚಿರಪರಿಚಿತ. ಬಾಲಕ-ವೃದ್ಧ, ಧನಿಕ-ನಿರ್ಧನ, ಪಂಡಿತ-ಜ್ಞಾನಿ ಎಲ್ಲರಿಗೂ ಪರಿಚಿತ. ಎಲ್ಲರೂ ದುಃಖನಿವೃತ್ತಿಯನ್ನು, ಸುಖಪ್ರಾಪ್ತಿಯನ್ನು ಬಯಸುತ್ತಾರೆ. ಅದಕ್ಕಾಗಿ ಪ್ರಯತ್ನಶೀಲರಾಗಿದ್ದಾರೆ. ಸ್ವಾರಸ್ಯದ ಸಂಗತಿಯೇನೆಂದರೆ ನಾವು ದುಃಖದ ಕಾರಣವನ್ನು ತಿಳಿದೂ, ಅನಾದಿಕಾಲದಿಂದ ಅವುಗಳಿಂದ ಪಾರಾಗುವ ಪ್ರಯತ್ನವನ್ನು ಮಾಡುತ್ತಲಿದ್ದೂ ಮಾನವ ಸಮಾಜದ ದುಃಖವು ದೂರವಾಗಿಲ್ಲ. ಹಾಗಾದರೆ ದುಃಖದಿಂದ ಪಾರಾಗಿ ಶಾಶ್ವತ ಸುಖವನ್ನು ಬಯಸುವುದಾದರೆ ದುಃಖದ ಸ್ವರೂಪ, ಅದರ ಪ್ರಕಾರಗಳು ಮತ್ತು ಅದರ ಕಾರಣಗಳನ್ನು ತಿಳಿದುಕೊಳ್ಳಬೇಕು.

### ದುಃಖದ ಪ್ರಕಾರಗಳು

ದುಃಖದಲ್ಲಿ ಅನೇಕ ಪ್ರಕಾರಗಳನ್ನು ಕಾಣಬಹುದು. ಶಾಸ್ತ್ರಗಳಲ್ಲಿ ದುಃಖವನ್ನು ಮೂರು ಗುಂಪುಗಳಲ್ಲಿ ವಿಂಗಡಿಸಲಾಗಿದೆ. ಅವನ್ನು ತ್ರಿತಾಪಗಳು ಎಂದು ಕರೆಯಲಾಗಿದೆ – ಆಧಿದೈವಿಕ, ಆಧಿಭೌತಿಕ ಮತ್ತು ಆಧ್ಯಾತ್ಮಿಕ. ಅತಿವೃಷ್ಟಿ, ಅನಾವೃಷ್ಟಿ, ಭೂಕಂಪ ಬಿರುಗಾಳಿಯಿಂದ ಉಂಟಾಗುವ ದುಃಖಗಳನ್ನು ಆಧಿದೈವಿಕ ದುಃಖಗಳು; ಹುಲಿ, ಸಿಂಹ, ಸರ್ಪಗಳು, ಸೊಳ್ಳೆ, ಕ್ರಿಮಿಕೀಟಗಳು, ಪತಂಗಗಳು ಮತ್ತು ಬೇರೆ ಮನುಷ್ಯರಿಂದ ಒದಗುವ ತೊಂದರೆಗಳನ್ನು ಆದಿಭೌತಿಕ ದುಃಖಗಳು ಎನ್ನಲಾಗಿದೆ. ನಮಗೆ ಸಂಬಂಧಪಟ್ಟ ಕಷ್ಟ, ದುಃಖಗಳು, ಯಾವುದಕ್ಕೆ ನಾವೇ ಕಾರಣರೋ ಅವು ಆಧ್ಯಾತ್ಮಿಕ ದುಃಖಗಳು. ಆಧ್ಯಾತ್ಮಿಕ ದುಃಖಗಳೂ ಎರಡು ಬಗೆಯವು. ವ್ಯಾಧಿ (ಶಾರೀರಿಕ ಕಷ್ಟಗಳು, ನೋವುಗಳು) ಮತ್ತು ಆಧಿ (ಮಾನಸಿಕ ಕಷ್ಟಗಳು) ಈ ಕಷ್ಟ ಅನುಭವದಲ್ಲೂ ತರತಮವಿದೆ – ಸಣ್ಣ ಸಣ್ಣ ಕಷ್ಟಗಳು ಪ್ರತಿಯೊಬ್ಬರ ಜೀವನದಲ್ಲೂ ಬರುತ್ತಲೇ ಇರುತ್ತವೆ. ಆದರೆ ಅಪರೂಪಕ್ಕೆ ಅವನನ್ನು ಅಲುಗಿಸಿ ಹಾಕುವಂತಹ, ಅವನನ್ನು ಅಸಹಾಯನನ್ನಾಗಿಸುವ ಭಯಂಕರ ದುಃಖಗಳು ಬರಬಹುದು. ಬೌದ್ಧ ಭಿಕ್ಷುಣಿ ಪಟಾಚಾರಾಳ ಜೀವನದ ಘಟನೆ ಈ ಎರಡನೇ ಗುಂಪಿಗೆ ಸೇರಿದ್ದು. ಗರ್ಭಿಣಿಯಾಗಿದ್ದ ಅವಳು ತನ್ನ ಪತಿ ಮತ್ತು ಐದು ವರ್ಷದ ಮಗನೊಂದಿಗೆ ತಂದೆಯ ಮನೆಗೆ ಹೋಗುತ್ತಿದ್ದಳು. ಕಾಡಿನ ಮಾರ್ಗದಲ್ಲಿ ಅವಳಿಗೆ ಪ್ರಸವವಾಯಿತು. ಕಾಡಿನಲ್ಲಿ ಅವಳ ಪತಿ ಹಾವು ಕಡಿದು ತೀರಿಕೊಳ್ಳುತ್ತಾನೆ. ಶೋಕತಪ್ತಳಾದ ಪಟಾಚಾರಾ ಇಬ್ಬರು ಮಕ್ಕಳೊಂದಿಗೆ ನದಿ ದಾಟುತ್ತಿದ್ದಳು. ಆಗ ನವಜಾತ ಶಿಶುವನ್ನು ಒಂದು ತೋಳ ಎತ್ತಿಕೊಂಡು ಹೋಯಿತು, ಮೊದಲ ಮಗ ನದಿ ಪ್ರವಾಹದಲ್ಲಿ ಕೊಚ್ಚಿಕೊಂಡು ಹೋದನು. ಶೋಕತಪ್ತಳಾದ ಅವಳು ತಂದೆಯ ಮನೆಗೆ ಹೋಗಿ ನೋಡಿದರೆ ಆ ಮನೆಯು ಅಗ್ನಿಗೆ ಆಹುತಿಯಾಗಿದೆ. ಇಂತಹ ಶೋಚನೀಯ ಸ್ಥಿತಿಯಲ್ಲಿ ಮನಸ್ಸಿನ ಸ್ತಿಮಿತವನ್ನು ಕಾಪಾಡಿಕೊಳ್ಳುವುದಾದರೂ ಹೇಗೆ? ಹುಚ್ಚಿಯಾದಂತಾದ ಅವಳು ಬುದ್ಧನಲ್ಲಿ ಶರಣಾಗುತ್ತಾಳೆ. ಅವಳಿಗೆ ಶಾಂತಿ ಸಿಗುತ್ತದೆ. ಅವಳು ಬುದ್ಧನ ಸಂಘದಲ್ಲಿ ಭಿಕ್ಷುಣಿಯಾಗುತ್ತಾಳೆ.

### ಶಾರೀರಿಕ ದುಃಖಗಳು

ಮನುಷ್ಯನ ಕಷ್ಟಸಂಕಟಗಳಲ್ಲಿ ಶಾರೀರಿಕ ಸಂಕಟಗಳ ಪಾಲು ದೊಡ್ಡದು. ಮನುಷ್ಯ ಅಸಂಸ್ಕೃತನಾದಷ್ಟು, ದೇಹಾತ್ಮಬುದ್ಧಿಯಿದ ಕೂಡಿದಷ್ಟು ಅವನಿಗೆ ಶರೀರದ ದುಃಖಗಳು ಹೆಚ್ಚು ಕಾಡುತ್ತವೆ. ಸುಸಂಸ್ಕೃತ ಮನುಷ್ಯನಿಗೆ ಮಾನಸಿಕ ಸಂವೇದನಾಶೀಲತೆಯಿಂದ ಮಾನಸಿಕ ದುಃಖಗಳು ಅಧಿಕ ತೊಂದರೆ ಕೊಡುತ್ತವೆ. ಪಶು-ಪಕ್ಷಿಗಳಲ್ಲಿ ಮತ್ತು ನಿಮ್ನ ಸ್ತರದ ಪ್ರಾಣಿಗಳಲ್ಲಿ ಶಾರೀರಿಕ ದುಃಖಗಳೇ ಪ್ರಧಾನವಾಗಿರುತ್ತವೆ. ಏಕಕೋಶೀಯ ಜೀವಿ ಅಮೀಬಾದಿಂದ ಹಿಡಿದು ಪೂರ್ಣ ವಿಕಸಿತ ಮಸ್ತಿಷ್ಕ ಮತ್ತು ಅದ್ಭುತವಾದ ನರ ವ್ಯೂಹದಿಂದ ಕೂಡಿದ ಮನುಷ್ಯನವರೆಗಿನ ಜೀವಿಗಳ ಶಾರೀರಿಕ ದುಃಖದ ರೂಪವನ್ನು ವಿಶ್ಲೇಷಿಸಿದಾಗ ದುಃಖದ ಸ್ವರೂಪವನ್ನು ಕುರಿತಂತೆ ನಮಗೆ ಅನೇಕ ವಿಚಾರಗಳು ಗೊತ್ತಾಗುತ್ತವೆ.

ಅಮೀಬಾಕ್ಕೆ ಸುಖ ಅಥವಾ ದುಃಖ ಎಂಬುದು ಇಲ್ಲ. ಅದರಲ್ಲಿ ಎರಡೇ ಬಗೆಯ ಕ್ರಿಯೆಗಳು ನಡೆಯುವುದು. ತನಗೆ ಅನುಕೂಲವಾದ ಭೋಜನ ಸಾಮಗ್ರಿ ದೊರೆತಾಗ ಅದರ ಶರೀರ ಆ ಕಡೆಗೆ ಹೋಗುತ್ತದೆ. ತನಗೆ ತೊಂದರೆ ಕೊಡುವ ಯಾವುದೇ ವಸ್ತು ಬಳಿಸಾರಿದರೆ ಅದು ಅದಕ್ಕೆ ವಿರುದ್ಧ ದಿಕ್ಕಿನಲ್ಲಿ ಚಲಿಸುತ್ತದೆ. ಎಂದರೆ ಅದರಲ್ಲಿ ಆಕರ್ಷಣೆ ಮತ್ತು ವಿಕರ್ಷಣೆ ಎಂಬ ಎರಡು ಕ್ರಿಯೆಗಳು ನಡೆಯುತ್ತವೆ. ಅವೆರಡೂ ಸ್ವಾಭಾವಿಕ ಕ್ರಿಯೆಗಳು. ಅದರ ಜೀವನ ಸಾಗಲು ಅವೆರಡೂ ಆವಶ್ಯಕ. ಜೀವಿಗಳು ವಿಕಾಸವಾದಂತೆ ಈ ಎರಡು ಕ್ರಿಯೆಗಳು ಜಟಿಲವಾಗುತ್ತ ಹೋಗುತ್ತವೆ. ಇದು ಪ್ರಾಣಿಶಾಸ್ತ್ರದಿಂದ ಗೊತ್ತಾಗುವ ವಿಚಾರ.

ಜೀವಿಗಳ ಮೆದುಳು ವಿಕಸಿತವಾದಂತೆ ಸುಖ-ದುಃಖ ಇತ್ಯಾದಿ ಸಂವೇದನೆಗಳು ಹೆಚ್ಚು ಸ್ಪಷ್ಟವಾಗುತ್ತ ಹೋಗುತ್ತವೆ. ಸ್ವಾಭಾವಿಕ ಪ್ರಕ್ರಿಯೆ(instinct) ಯಿಂದ ಕೂಡಿದ ನಾಯಿ ಬೆಕ್ಕು ಇತ್ಯಾದಿ ಪ್ರಾಣಿಗಳು ದುಃಖದಿಂದ ಅಳುವುದು ಕೂಗುವುದು ಮತ್ತು ಸುಖದಿಂದ ಹರ್ಷಿಸುವುದು ಇತ್ಯಾದಿ ಸ್ಪಷ್ಟವಾಗಿ ಗೊತ್ತಾಗುತ್ತದೆ. ಆದರೆ ಈ ನಿಮ್ನ ಪ್ರಾಣಿಗಳಿಗೆ ಮಸ್ತಿಷ್ಕವಿದ್ದೂ ತಮ್ಮನ್ನು ತಾವು ದೇಹದಿಂದ ಮತ್ತು ದೈಹಿಕ ಕ್ರಿಯೆಗಳಿಂದ ಪ್ರತ್ಯೇಕ ಎಂದು ಬಗೆಯುವ ಶಕ್ತಿಯಿಲ್ಲ. ಆದ್ದರಿಂದ ನಾವು ಆಲೋಚಿಸಿದಾಗ, ಆ ಎಲ್ಲ ಕ್ರಿಯೆಗಳನ್ನು ಅಮೀಬಾದ ಆಕರ್ಷಣೆ ಮತ್ತು ವಿಕರ್ಷಣೆ ಎಂಬ ಗುಂಪಿಗೇ ಸೇರಿಸಬಹುದು. ಮಾನವ ತನ್ನನ್ನು ತಾನು ಶಾರೀರಿಕ ಕ್ರಿಯೆಗಳಿಂದ ಹಾಗೂ ಶರೀರದಿಂದ ಪ್ರತ್ಯೇಕವಾಗಿ ನೋಡುವ ಶಕ್ತಿ ಯನ್ನು ಹೊಂದಿದ್ದಾನೆ. ಅವನಲ್ಲಿ ದೇಹಕ್ಕಿಂತ ಪ್ರತ್ಯೇಕವಿರುವ ಸಾಕ್ಷಿ ಚೈತನ್ಯದ ಅರಿವನ್ನು ಊಹಿಸಬಹುದು. ಆದ್ದರಿಂದ ಅವನು ಸುಖ-ದುಃಖಗಳನ್ನು ಪ್ರತ್ಯೇಕವಾಗಿ ನೋಡಲೂ ಬಲ್ಲನು.

### ಮಾನಸಿಕ ದುಃಖಗಳು

ಜೀವಿಯ ಅಸ್ತಿತ್ವವನ್ನು ಕಾಪಾಡಲು ಪ್ರಕೃತಿಯು ನೀಡಿದ ಶಾರೀರಿಕ ದುಃಖವು ದೇಹದ ಸ್ವಾಭಾವಿಕ ಕ್ರಿಯೆಗಳಲ್ಲಿ ಒಂದು ಎಂದು ಮೇಲಿನ ವಿಶ್ಲೇಷಣೆಯಿಂದ ಗೊತ್ತಾಗುತ್ತದೆ. ಇದನ್ನು ಸ್ಪಷ್ಟವಾಗಿ ತಿಳಿಯಲು ಒಬ್ಬ ಹುಟ್ಟು ಕುರುಡನ ಉದಾಹರಣೆಯನ್ನು ತೆಗೆದುಕೊಳ್ಳೋಣ. ಅವನು ಯಾವತ್ತೂ ಕಣ್ಣುಗಳಿಂದ ಹೊರಜಗತ್ತನ್ನು ನೋಡಿಲ್ಲ. ಅವನ ಜಗತ್ತು ಬಹಳ ಬೇರೆ. ಅವನು ತನ್ನ ಅನನುಕೂಲಗಳು ಮತ್ತು ಇತಿಮಿತಿಗಳನ್ನು ಇನ್ನೊಬ್ಬರೊಂದಿಗೆ ಹೋಲಿಸಿಕೊಂಡು ಅರ್ಥಮಾಡಿಕೊಳ್ಳಬಲ್ಲ. ಸ್ವಯಂ ಅಲ್ಲ. ಅವನ ಶರೀರ ಮತ್ತು ಇಂದ್ರಿಯಗಳು ಅತ್ಯಂತ ಪಟುವಾಗಿರುತ್ತವೆ. ಅವು ಅವನ ಒಂದು ಅಂಗದ ನ್ಯೂನತೆಯನ್ನು ಭರಿಸಲು ಬದ್ಧವಾಗಿರುತ್ತವೆ. ಇನ್ನೊಂದು ಉದಾಹರಣೆ: ಒಬ್ಬ ಬಾಲಕ ಹುಟ್ಟಿದಂದಿನಿಂದ ಉಸಿರಾಟದ ತೊಂದರೆಯಿಂದ ಒದ್ದಾಡುತ್ತಿದ್ದಾನೆ. ಅವನು ಆ ತೊಂದರೆಗೆ ಹೊಂದಿಕೊಂಡಿರುತ್ತಾನೆ. ಅದು ಅವನಿಗೆ ದುಃಖವಾಗಿರದು. ಮೂರನೆಯ ಉದಾಹರಣೆಯನ್ನು ನೋಡೋಣ. ಒಬ್ಬ ಹುಡುಗ ಹಳ್ಳಿಯಲ್ಲಿ ಹುಟ್ಟಿದವನು, ಅವನು ಗುಡಿಸಿಲಿನಲ್ಲಿ ಬೆಳೆದು ಬಂದಿದ್ದಾನೆ. ಲಾಟೀನಿನ ಬೆಳಕಿನಲ್ಲಿ ಓದುವುದು, ಚಪ್ಪಲಿ ಇಲ್ಲದೆ ನಡೆಯುವುದು ಅವನಿಗೆ ಅಭ್ಯಾಸವಾಗಿ ಹೋಗಿದೆ. ನೆಲದ ಮೇಲೆ ಗೋಣಿತಾಟು ಹರಡಿ ಮಲಗಲು ಅವನಿಗೇನೂ ದುಃಖವಿಲ್ಲ. ಆದರೆ ಅವನು ಕೆಲದಿನಗಳಿಗೆಂದು ನಗರಕ್ಕೆ ಬರುತ್ತಾನೆ. ಅಲ್ಲಿನ ಥಳುಕು-ಬಳುಕು, ರೇಡಿಯೋ, ವಿದ್ಯುತ್ ದೀಪಗಳು, ಫ್ಯಾನು, ಮೃದುವಾದ ಹಾಸಿಗೆ-ದಿಂಬುಗಳು ಎಲ್ಲವನ್ನೂ ನೋಡಿ, ತನ್ನ ಹಳ್ಳಿಗೆ ಮರಳಿದ ಮೇಲೆ ಅವನು ತನ್ನನ್ನು ತಾನು ದುಃಖಿ ಎಂದು ಬಗೆಯುತ್ತಾನೆ. ಎಂದರೆ ತನ್ನ ಕೊರತೆಯ ಅರಿವು ಮಾನಸಿಕ ದುಃಖಕ್ಕೆ ಮುಖ್ಯ ಕಾರಣ, ಇದರಿಂದ ನಮಗೆ ಇನ್ನೊಂದು ವಿಚಾರ ಸ್ಪಷ್ಟವಾಗುತ್ತದೆ: ನಮ್ಮ ಸುಖ-ದುಃಖವು ಪರಿಸ್ಥಿತಿಯೊಂದಿಗೆ ಏಗುವ ನಮ್ಮ ಸಾಮರ್ಥ್ಯವನ್ನು ಮತ್ತು ಅದಕ್ಕೆ ತಕ್ಕಂತೆ ನಮ್ಮನ್ನು ನಾವು ರೂಪಿಸಿಕೊಳ್ಳುವಿಕೆಯನ್ನು ಅವಲಂಬಿಸಿದೆ. ಚಿಕ್ಕ ಮಕ್ಕಳ ಶರೀರ ಮತ್ತು ಮನಸ್ಸು ಪರಿಸ್ಥಿತಿಗಳಿಗೆ ತಕ್ಕಂತೆ ಬಹಳ ಸುಲಭವಾಗಿ ಹೊಂದಿಕೊಳ್ಳುತ್ತವೆ. ಚಿಕ್ಕ ಮಗು ತನಗೆ ರೋಗ ಬಂದರೂ ಆಟವಾಡುತ್ತಿರುತ್ತದೆ. ಅದರ ಕಾಲಿನ ಮೂಳೆ ಮುರಿದುಹೋಗಿದ್ದರೂ ಅದು ಮಲಗಿಕೊಂಡೇ ಅಲ್ಲೇ ಏನೋ ಆಡುತ್ತಿರುತ್ತದೆ.

ಮಾನಸಿಕ ದುಃಖಕ್ಕೆ ಒಂದು ಪ್ರಮುಖ ಕಾರಣ ಭವಿಷ್ಯದ ಚಿಂತೆ ಹಾಗೂ ತಾನು ಹಿಂದೆ ಮಾಡಿದ ತಪ್ಪುಗಳಿಗಾಗಿ ವ್ಯಥೆ. ಭವಿಷ್ಯತ್ ಕಾಲ ಮತ್ತು ಭೂತಕಾಲಕ್ಕೆ ಅಸ್ತಿತ್ವವೇ ಇಲ್ಲ ಎಂಬುದು ಸತ್ಯವಾದರೂ ನಮ್ಮಲ್ಲಿ ಹೆಚ್ಚಿನ ಜನ ಭೂತ ಅಥವಾ ಭವಿಷ್ಯದಲ್ಲೇ ಬದುಕುತ್ತಿರುತ್ತಾರೆ, ವರ್ತಮಾನದಲ್ಲಿ ಅಲ್ಲ. ಜೀವನದಲ್ಲಿ ಪ್ರತಿಯೊಬ್ಬರಿಂದಲೂ ತಪ್ಪುಗಳು ನಡೆಯುತ್ತಿರುತ್ತವೆ. ಆದರೆ ನಾವು ವ್ಯರ್ಥವಾಗಿ ಅವನ್ನು ಚಿಂತಿಸಿ ಚಿಂತಿಸಿ ವರ್ತಮಾನವನ್ನು ದುಃಖಮಯವಾಗಿಸಿಕೊಳ್ಳುತ್ತೇವೆ. ಇದಕ್ಕೊಂದು ಸ್ವಾರಸ್ಯದ ಉದಾಹರಣೆ ಇದೆ. ಒಬ್ಬ ಅಜ್ಜಿ ತನ್ನ ಯುವಕ ಮಗನೊಂದಿಗೆ ರೈಲಿನಲ್ಲಿ ಸಂಚರಿಸುತ್ತಿದ್ದಳು. ರೈಲಿನಲ್ಲಿ ಜನ ತುಂಬಿದ್ದರಿಂದ ಯುವಕ

ಎರಡು ಎದುರುಬದುರಿನ ಸೀಟುಗಳ ನಡುವೆ ನೆಲದಲ್ಲಿ ಮಲಗಿದನು. ರಾತ್ರಿ ಇದ್ದಕ್ಕಿದ್ದಂತೆ ಮೇಲಿನ ಸೀಟಿನಿಂದ ಒಂದು ಕುಂಬಳಕಾಯಿ ಕೆಳಕ್ಕೆ ಬಿತ್ತು , ಆದರೆ ಅದು ಯುವಕನ ಮೇಲೆ ಬೀಳಲಿಲ್ಲ. ಸದ್ಯ ಏನೂ ತೊಂದರೆಯಾಗಲಿಲ್ಲವಲ್ಲ ಎಂದು ಅಲ್ಲಿದ್ದ ಎಲ್ಲರೂ ನಿಟ್ಟುಸಿರುಬಿಟ್ಟರು. ಆದರೆ ಅವನ ವೃದ್ಧ ತಾಯಿ ಅಳಲಾರಂಭಿಸಿದವಳು ಪ್ರಯಾಣದ ಉದ್ದಕ್ಕೂ ಅಳುತ್ತಲೇ ಇದ್ದಳು. ಕಾರಣ ಒಂದು ವೇಳೆ ಕುಂಬಳಕಾಯಿ ತಲೆಯ ಮೇಲೆ ಬಿದ್ದಿದ್ದರೆ ಏನಾಗುತ್ತಿತ್ತು ಎಂದು.

ಗೀತೆಯಲ್ಲಿ ಬರುವ ಅರ್ಜುನ ವಿಷಾದವು ಭವಿಷ್ಯದ ಶೋಕಕ್ಕೆ ಒಂದು ದೃಷ್ಟಾಂತ. ಯುದ್ಧದಲ್ಲಿ ಬಂಧುಬಳಗ ತೀರಿಕೊಳ್ಳಲಿದ್ದಾರೆ, ಕುಲ ನಾಶವಾಗುತ್ತದೆ, ಕುಲಧರ್ಮಗಳು ನಾಶವಾಗುತ್ತವೆ ಇತ್ಯಾದಿ ಎಂದು ಅರ್ಜುನನಿಗೆ ದುಃಖ. ಉಪನಿಷತ್ತುಗಳಲ್ಲಿ ಹೇಳಲಾಗಿದೆ, ಬ್ರಹ್ಮವಿದನಾದವನು ''ನಾನು ಪಾಪವನ್ನು ಏಕೆ ಮಾಡಿದೆ? ನಾನು ಪುಣ್ಯವನ್ನು ಏಕೆ ಮಾಡಲಿಲ್ಲ?'' ಎಂಬಿತ್ಯಾದಿಯಾಗಿ ಭೂತಕಾಲದ ಭೂತಗಳನ್ನು ತಲೆಯ ಮೇಲೆ ಹೊತ್ತುಕೊಳ್ಳುವುದಿಲ್ಲ.

ಭವಿಷ್ಯದ ದುಃಖವು ಸಾಮಾನ್ಯವಾಗಿ ಭಯದ ರೂಪ ತಾಳುತ್ತದೆ. ಈ ಭಯ ಎಲ್ಲರನ್ನೂ ಒಂದಿಲ್ಲೊಂದು ರೂಪದಲ್ಲಿ ಕಾಡುತ್ತದೆ:

**ಭೋಗದಲಿ ರೋಗಭಯ, ಕುಲದಲ್ಲಿ ಚ್ಯುತಿಭಯ**
**ಧನವಿರಲು ನೃಪನಿಂದಿಹುದು ಭಯ,**
**ಮಾನದಲಿ ದೈನ್ಯ ಭಯ, ಬಲದಲಿ ಶತ್ರುಭಯ**
**ರೂಪಕ್ಕೆ ಮುಪ್ಪಿನಾ ಮಿಗಿಲು ಭಯವು**
**ಓದಿರಲು ವಾದಿ ಭಯ, ಗುಣಕ್ಕೆ ಮತ್ಸರ ಭಯವು**
**ದೇಹಕ್ಕೆ ಮರಣದ ಭಯದಿಂದ ಭಯವು**
**ಜಗದಲಿ ಎಲ್ಲ ವಸ್ತುಗಳು ಭಯದಿಂದ**
**ಕೂಡಿರಲು ವೈರಾಗ್ಯವೊಂದೇ ಅಭಯವು.**

— ಭರ್ತೃಹರಿ

ಮಾನಸಿಕ ದುಃಖವು ಆಬಾಲವೃದ್ಧರಾದಿಯಾಗಿ ಸಕಲರಿಗೂ ಇದೆ. ಅತ್ಯಂತ ಪ್ರಾಪಂಚಿಕನಲ್ಲಿ ಮತ್ತು ಮಕ್ಕಳಲ್ಲಿ ಶಾರೀರಿಕ ದುಃಖವೇ ಮುಖ್ಯವಾಗಿರುತ್ತದೆ. ಆದರೆ ಮಗುವಿಗೆ ತಾಯ್ತಂದೆಯರಿಂದ ದೂರನಾದರೆ, ಆಟದ ಸಾಮಾನು ಕೈಬಿಟ್ಟು ಹೋದರೆ ಎಂಬಿತ್ಯಾದಿ ಮಾನಸಿಕ ದುಃಖಗಳು ಇರುತ್ತವೆ. ವೃದ್ಧರು ಸದಾ ಚಿಂತಾಸಕ್ತರಾಗಿರುತ್ತಾರೆ. ಅವರ ಜೀವನದಲ್ಲಿ ದುಃಖವೇ ಅಧಿಕವಾಗಿರುತ್ತದೆ.

ಒಬ್ಬ ವ್ಯಕ್ತಿ ಸುಸಂಸ್ಕೃತನಾದಷ್ಟೂ ಅವನ ಮನಸ್ಸು ವಿಕಾಸ ಹೊಂದಿದಷ್ಟೂ ಅವನ ಮಾನಸಿಕ ದುಃಖಗಳು ಅಧಿಕವಾಗುತ್ತವೆ. ಉದಾ : ಸಂಗೀತ ಗೊತ್ತಿಲ್ಲದ ವ್ಯಕ್ತಿಗೆ ಯಾವ ರೀತಿ ಹಾಡಿದರೂ ಏನೂ ಅನ್ನಿಸುವುದಿಲ್ಲ. ಆದರೆ ಸಂಗೀತ ಬಲ್ಲವನಿಗೆ ರಾಗ–ತಾಳದಲ್ಲಿ ಸ್ವಲ್ಪ ವ್ಯತ್ಯಾಸವಾದರೂ ಬಹಳ ದುಃಖವಾಗುತ್ತದೆ. ನೈತಿಕ ಉನ್ನತಿ, ಜೀವನ ಮೌಲ್ಯಗಳ ಪರಿಜ್ಞಾನ, ಸ್ವಾತಂತ್ರ್ಯಪ್ರಜ್ಞೆಯಿಂದಲೂ ದುಃಖಗಳು ಅಧಿಕವಾಗುತ್ತವೆ. ಉನ್ನತ ನೈತಿಕ ಆದರ್ಶ ಹೊಂದಿದ ವ್ಯಕ್ತಿಗೆ ತಾನು ಅರಿತೋ ಅರಿಯದೆಯೋ ಮಾಡಿದ ಸಣ್ಣ ತಪ್ಪು ಬಹಳ ನೋವು ಕೊಡುತ್ತದೆ. ಸಾಮಾನ್ಯ ವ್ಯಕ್ತಿ ಅದೇ ತಪ್ಪನ್ನು ಮಾಡಿದರೆ ಅವನಿಗೆ ಅಷ್ಟೇನೂ ಅನ್ನಿಸದು. ಸ್ವಾತಂತ್ರ್ಯಪ್ರೇಮಿಯು ಉಳಿದೆಲ್ಲ ಕಷ್ಟಗಳನ್ನು ಸಹಿಸಬಲ್ಲನು, ಆದರೆ ಪಾರತಂತ್ರ್ಯದ ದುಃಖವನ್ನು ತಾಳಲಾರನು. ಅವನಿಗೆ ಪರಾಧೀನತೆ ನೀಡುವ ಸುಖ–ಸೌಕರ್ಯಗಳು, ಅನುಕೂಲಗಳು ಇಷ್ಟವಾಗಲಾರವು. ವ್ಯಕ್ತಿ ಆದರ್ಶನಿಷ್ಠನಾದಷ್ಟು, ಭಾವಜೀವಿಯಾದಷ್ಟು, ಮಾನವ ಪ್ರೇಮಿಯಾದಷ್ಟೂ ಅವನ ದುಃಖ–ಕಷ್ಟಗಳು ಅಧಿಕವಾಗುತ್ತವೆ. ಸ್ವಾಮಿ ವಿವೇಕಾನಂದರು ಹೇಳುವಂತೆ ''Suffering is the lot of World's best and the bravest'' — ಕಷ್ಟ, ಸಂಕಟಗಳು ಧೀರರಿಗೆ ಭೂಷಣಗಳು.

ಯೋಗಿಗಳು, ಸಿದ್ಧರು, ಮಹಾಪುರುಷರು ಮತ್ತು ಅವತಾರ ಪುರುಷರ ಜೀವನವೂ ಕಷ್ಟ–ದುಃಖಗಳಿಂದ ರಹಿತವಾದುದಲ್ಲ. ಯೋಗಿಗಳ ಪ್ರಕಾರ ಎಲ್ಲರೂ ದುಃಖದಲ್ಲಿದ್ದಾರೆ. ಅವರಿಗೆ ಸುಖದಾಯಕವೆನಿಸುವ ಸಂಗತಿಗಳೂ ದುಃಖಕರವೇ.

**ಪರಿಣಾಮ–ತಾಪ–ಸಂಸ್ಕಾರ–ದುಃಖೈರ್ಗುಣವೃತ್ತಿವಿರೋಧಾಚ್ಚ ದುಃಖಮೇವ ಸರ್ವಂ ವಿವೇಕಿನಃ ।**

*ಪತಂಜಲಿ ಯೋಗ ಸೂತ್ರ, ೨.೧೫*

ಎಂದರೆ ಸುಖವೂ ಅಂತಿಮ ಪರಿಣಾಮದಲ್ಲಿ ದುಃಖದಾಯಕವಾದ್ದರಿಂದ, ಸುಖವು ಸುಖದ ಸಂಸ್ಕಾರ ಮತ್ತು ವಾಸನೆ ಯನ್ನು ಉಂಟುಮಾಡುವುದರಿಂದ ಅದೂ ದುಃಖವೇ. ಮತ್ತು ಬುದ್ಧಿವೃತ್ತಿಗಳು ತ್ರಿಗುಣಾತ್ಮಕವಾದ್ದರಿಂದ ಮತ್ತು ಅವುಗಳಲ್ಲಿ ಪರಸ್ಪರ ವಿರೋಧವಿರುವುದರಿಂದ ಶಾಶ್ವತ ಸುಖ ಎಂದಿಗೂ ಲಭಿಸದು. ಈ ನಾಲ್ಕು ಕಾರಣಗಳಿಂದ ಯೋಗಿಗಳ ಸುಖವೂ ದುಃಖಕರವೇ.

ಮಹಾತ್ಮರ ಜೀವನವನ್ನು ಅವಲೋಕಿಸಿದಾಗ ನಮಗೆ ಅಲ್ಲಿ ಸುಖಕ್ಕಿಂತ ದುಃಖವೇ ಕಾಣಸಿಗುತ್ತದೆ. ರಾಮನ ಜೀವನ ಅದಕ್ಕಿಂತ ಹೆಚ್ಚಾಗಿ ಸೀತೆಯ ಜೀವನ ದುಃಖದಲ್ಲೇ ಕಳೆದುಹೋಯಿತು. ಕ್ರಿಸ್ತನನ್ನು ಶಿಲುಬೆಗೇರಿಸಲಾಯಿತು. ಶ್ರೀರಾಮಕೃಷ್ಣರಿಗೆ ಅತೀವ ವೇದನೆಯ ಕ್ಯಾನ್ಸರ್ ಬಂದಿತ್ತು. ಸ್ವಾಮೀಜಿಯವರು ಜೀವನದಲ್ಲಿ ಕಂಡುಂಡ ದುಃಖಗಳಿಗೆ ಕೊನೆಮೊದಲಿಲ್ಲ.

### ಸಾಮಾಜಿಕ ವಿಷಮತೆಗಳು

ಮೇಲೆ ಹೇಳಿದ ಶಾರೀರಿಕ, ಮಾನಸಿಕ ದುಃಖಗಳ ಹೊರತಾಗಿ ಮಾನವ ಸಮಾಜದಲ್ಲಿ ಅನಿವಾರ್ಯವಾಗಿರುವ ಕೆಲಕೆಲವು ವಿಷಮತೆಗಳು ಅವನ ಜೀವನವನ್ನು ದುಃಖಕರವಾಗಿಸಿವೆ. ಮಾನವ ಇತಿಹಾಸವು ಅಸಮಾನತೆ, ಯುದ್ಧ ಮತ್ತು ಶೋಷಣೆಯ ಸರಪಳಿಯೇ ಆಗಿದೆ. ೧) ಅಸಹಾಯಕತೆ ೨) ಅನಿಶ್ಚಿತತೆ (insecurity) ಮತ್ತು ೩) ಅಗತ್ಯ ವಸ್ತುಗಳ ಅಭಾವ — ಮನುಷ್ಯನಿಗೆ ಈ ಮೂರು ಸಮಸ್ಯೆಗಳನ್ನು ಜಯಿಸಲಾಗಿಲ್ಲ. ಮನುಷ್ಯ ಮೃತ್ಯು

ವಿನೆದುರು ಅಸಹಾಯಕನಾಗಿದ್ದಾನೆ. ವಿಜ್ಞಾನ – ತಂತ್ರಜ್ಞಾನದ ಅದ್ಭುತ ಪ್ರಗತಿಯ ಹೊರತಾಗಿಯೂ ಮನುಷ್ಯ ತನ್ನ ಇತಿ–ಮಿತಿಗಳನ್ನು ದಾಟಿಲ್ಲ. ಭವಿಷ್ಯದ ಅನಿಶ್ಚಿತತೆಯು ಅವನನ್ನು ಸದಾ ದುಃಖಿತನನ್ನಾಗಿಸಿದೆ. ಎಲ್ಲ ಕಾಲಗಳಲ್ಲೂ ಮನುಷ್ಯನನ್ನು ಕಾಡಿದ, ಮುಂದೆಯೂ ಕಾಡಲಿರುವ ೩ನೆಯ ದುಃಖದ ಸಂಗತಿ, ಸುಖ ಜೀವನವನ್ನು ನಡೆಸಲು ಬೇಕಾದ ಅಗತ್ಯ ವಸ್ತುಗಳ ಅಸಮ ವಿತರಣೆ ಮತ್ತು ಕೊರತೆ.

ಹೀಗೆ ಮನುಷ್ಯ ಸದಾಕಾಲದಿಂದ ಅನೇಕ ದುಃಖಗಳಿಂದ ಮುತ್ತಲ್ಪಟ್ಟಿದ್ದಾನೆ. ಮನುಷ್ಯ ದಿನವೂ ಒಂದಿಲ್ಲೊಂದು ದುಃಖವನ್ನು ಎದುರಿಸುತ್ತಲೇ ಇದ್ದಾನೆ. ಈಗ ದುಃಖದ ವಿವರಣೆಯನ್ನು ಬಿಟ್ಟು ದುಃಖನಿವೃತ್ತಿಯ ಉಪಾಯಗಳನ್ನು ಆಲೋಚಿಸೋಣ.

### ದುಃಖನಿವೃತ್ತಿ

ಅನಾದಿಕಾಲದಿಂದಲೂ ಮನುಷ್ಯ ದುಃಖದಿಂದ ಪಾರಾಗಲು ಪ್ರಯತ್ನಿಸುತ್ತಲೇ ಇದ್ದಾನೆ. ದುಃಖ ಅನಿವಾರ್ಯವಾಗಿರುವಂತೆ, ದುಃಖದಿಂದ ಪಾರಾಗಲೆಂದಿರುವ ಉಪಾಯಗಳೂ ಅಷ್ಟೇ ಸಹಜವಾಗಿವೆ. ಆಬಾಲವೃದ್ಧರಾಗಿ ಎಲ್ಲರೂ ದುಃಖನಿವೃತ್ತಿಗಾಗಿ, ಸುಖ ಪ್ರಾಪ್ತಿಗಾಗಿ ಪ್ರಯತ್ನಿಸುತ್ತಲೇ ಇದ್ದಾರೆ. ಮನುಷ್ಯ ದುಃಖದಿಂದ ಪಾರಾಗಲೆತ್ನಿಸುತ್ತಿದ್ದಂತೆ, ಆ ದುಃಖ ಮತ್ತು ದುಃಖನಿವೃತ್ತಿಯ ಉಪಾಯವು ವಿವಿಧ ದಾರ್ಶನಿಕ ಮತಗಳ ರೂಪ ತಾಳಿದೆ.

೧) **ಚಾರ್ವಾಕ ಮತ :** ಚಾರ್ವಾಕರು ಅಥವಾ ಜಡವಾದಿಗಳು, ಜೀವನದಲ್ಲಿ ದುಃಖ ಇರಬಹುದು, ಆದರೆ ಜೊತೆಯಲ್ಲಿ ಸ್ವಲ್ಪ ಸುಖವೂ ಇದೆ. ನೀವು ಆ ಸುಖವನ್ನು ಅನುಭವಿಸಿರಿ, ಭೂತ ಭವಿಷ್ಯಗಳ ಚಿಂತನೆಯನ್ನು ಬಿಡಿರಿ ಎನ್ನುತ್ತಾರೆ. ಚಾರ್ವಾಕರು ಇಂದ್ರಿಯ ಸುಖಭೋಗಗಳಿಗೆ ಹೆಚ್ಚು ಮಹತ್ವ ಕೊಡುವವರು. ಚಾರ್ವಾಕರ ಕುರಿತ ಈ ಶ್ಲೋಕ ಪ್ರಸಿದ್ಧವಾದುದು :

**ಯಾವಜ್ಜೀವೇತ್ ಸುಖಂ ಜೀವೇದೃಣಂ ಕೃತ್ವಾ ಘೃತಂ ಪಿಬೇತ್ ।**
**ಭಸ್ಮೀಭೂತಸ್ಯ ದೇಹಸ್ಯ ಪುನರಾಗಮನಂ ಕುತಃ ।**

‘ಬದುಕಿರುವವರೆಗೆ ಸುಖವಾಗಿ ಬದುಕಿರಿ. (ಅಗತ್ಯ ಬಿದ್ದರೆ) ಸಾಲ ಮಾಡಿಯಾದರೂ ತುಪ್ಪ ತಿನ್ನಿರಿ. (ಮರಣಾನಂತರ) ದೇಹ ಭಸ್ಮೀಭೂತವಾದ ಮೇಲೆ ಪುನರಾಗಮನದ ಮಾತೆಲ್ಲಿ? (ಎಂದರೆ ಋಣ ತೀರಿಸುವ ಅಗತ್ಯವೇನು?)’

ಹೀಗೆ ಚಾರ್ವಾಕರು ಬದುಕಿನ ದುಃಖವನ್ನು ಅಲ್ಲಗಳೆಯುವ ಪ್ರಯತ್ನ ಮಾಡುತ್ತಾರೆ.

**೨)ನಿರಾಶವಾದ :**

ಚಾರ್ವಾಕರಿಗೆ ಪೂರ್ತಿ ವಿರುದ್ಧವಾದುದ್ದು ನಿರಾಶಾವಾದಿಗಳ ಮತ. ಪಾಶ್ಚಾತ್ಯ ದಾರ್ಶನಿಕ ಶೋಪೆನ್‌ಹಾವರ್ ಇದನ್ನು ಎತ್ತಿ ಹಿಡಿದವನು. ಅವನ ಪ್ರಕಾರ ದುಃಖದಿಂದ ಕೂಡಿದ ಜಗತ್ತು ಬದುಕಲು ಅರ್ಹವಲ್ಲ. ಮನುಷ್ಯ ತನ್ನ ಅವಿವೇಕ, ಅರ್ಥಹೀನ ಆಸೆಗಳಿಂದ ದುಃಖಕ್ಕೊಳಗಾಗುತ್ತಲೇ ಇರುತ್ತಾನೆ. ಒಂದು ಆಸೆ ಈಡೇರುತ್ತಲೇ ಇನ್ನೊಂದು ಆಸೆ ಹುಟ್ಟುತ್ತದೆ. ಹೀಗೆ ನಮಗೆ ಯಾವತ್ತೂ ಶಾಶ್ವತ ಸುಖ ಸಿಗದು. ಇನ್ನೊಂದೆಡೆ ಮೃತ್ಯು ನಮ್ಮನ್ನು ನುಂಗಿಹಾಕಲು ಕಾಯುತ್ತಿದೆ. ನಿರಂತರ ಉಸಿರಾಟವು ಅವನನ್ನು ನಮ್ಮಿಂದ ದೂರವಿಟ್ಟಿದೆ. ಆಹಾರ–ನಿದ್ರೆಯಲ್ಲಿ ಮುಳುಗಿ ನಾವು ಮೃತ್ಯುವಿನಿಂದ ದೂರವಿರಲು ನೋಡುತ್ತೇವೆ. ಜನ್ಮದಿಂದಲೇ ಮೃತ್ಯು ನಮ್ಮ ದುಂಬಾಲು ಬಿದ್ದಿದೆ. ನಾವು ಅದರಿಂದ ಪಾರಾಗಲು ಎಷ್ಟೇ ಪ್ರಯತ್ನಿಸಿದರೂ, ಅದು ಕೊನೆಗೂ ನಮ್ಮನ್ನು ತಿಂದು ಹಾಕುತ್ತದೆ. ಜೀವನ ನೀರಿನ ಗುಳ್ಳೆಯ ಹಾಗೆ. ಗುಳ್ಳೆ ಎಷ್ಟೇ ದೊಡ್ಡದಾಗಿದ್ದರೂ ಕ್ಷಣಾರ್ಧದಲ್ಲಿ ಅದು ಒಡೆದುಹೋಗುತ್ತದೆ. ದುಃಖಕ್ಕೆ ಕಾರಣವಾದಂತಹ ವಾಸನೆಗಳು ಆಸೆಗಳು ಈಡೇರಿದರೆ, ಮನಸ್ಸು ಕರ್ಮಪ್ರವೃತ್ತವಾಗದೆ (ಅಕರ್ಮಣ್ಯದಿಂದ) ದುಃಖಕ್ಕೆ ಈಡಾಗುತ್ತದೆ. ಹೀಗೆ ಜೀವನವೆಲ್ಲ ದುಃಖಮಯ.

ಜೀವನ ಏಕೆ ಕೆಟ್ಟದ್ದೆಂದರೆ ಅದು ಸ್ವಾರ್ಥಪೂರ್ಣವಾಗಿದೆ, ಹೀನವಾಗಿದೆ. ಒಂದು ಮೀನು ಇನ್ನೊಂದನ್ನು ತಿಂದು ಬದುಕುತ್ತವೆ. ಒಂದು ಪ್ರಾಣಿ ಇನ್ನೊಂದನ್ನು ಕೊಂದು ಜೀವಿಸುತ್ತದೆ. ಮಾನವ ಸಮಾಜದಲ್ಲೂ ಶೋಷಣೆ ನಡೆಯುತ್ತಲೇ ಇರುತ್ತದೆ. ಮಾನವ ಇತಿಹಾಸವು ಕೊಲೆ, ದರೋಡೆ, ಸುಳ್ಳು, ಕಪಟಗಳಿಂದ ತುಂಬಿವೆ. ಶೋಫೇನ್‌ಹಾವರರ ಪ್ರಕಾರ ಜ್ಞಾನ ಅಥವಾ ಸಭ್ಯತೆ, ಶಿಷ್ಟಾಚಾರದಿಂದ ಈ ಪರಿಸ್ಥಿತಿಗಳಲ್ಲಿ ಯಾವ ವ್ಯತ್ಯಾಸವೂ ಕಂಡು ಬಂದಿಲ್ಲ. ಏಕೆಂದರೆ ಹೊಸ ಜ್ಞಾನದೊಂದಿಗೆ ಹೊಸ ಹೊಸ ಅಗತ್ಯಗಳು, ಹೊಸ ಹೊಸ ಅನೈತಿಕತೆಗಳು ಮತ್ತು ಹೊಸ ಸ್ವಾರ್ಥಗಳು ಹುಟ್ಟಿಕೊಂಡಿವೆ. ಜ್ಞಾನ ಅಧಿಕವಾದಂತೆ ದುಃಖವೂ ಅಧಿಕವಾಗಿದೆ. ಶೊಪೆನ್‌ಹಾವರ್ ಸಿದ್ಧಾಂತವು ಬೌದ್ಧ ದರ್ಶನದಂತೆ ‘ದುಃಖದ ಸತ್ಯತೆ’ಯನ್ನು ಹೇಳುತ್ತದೆ. ಆದರೆ ಅವನು ಬೌದ್ಧರು ಹೇಳಿದಂತೆ ದುಃಖನಿವೃತ್ತಿಯ ಉಪಾಯವನ್ನು ಹೇಳುವುದಿಲ್ಲ. ಅವನ ಪ್ರಕಾರ ಒಂದು ವೇಳೆ ದುಃಖಗಳು ಇಲ್ಲದಿದ್ದರೆ ಮಾನವನ ಮೂರ್ಖತನ ಮತ್ತು ತಪ್ಪುಗಳಿಗೆ ಅಂಕುಶವೇ ಇರುತ್ತಿರಲಿಲ್ಲ.

೩) **ಇನ್ನೊಂದು ಮತ** ದುಃಖವನ್ನು ಇಷ್ಟು ಕೆಟ್ಟದಾಗಿ ನೋಡುವುದಿಲ್ಲ. ಅವರ ಪ್ರಕಾರ ದುಃಖದಿಂದಲೇ ಜೀವಂತಿಕೆಯ ಅರಿವಾಗುತ್ತದೆ. ಮಗುವಿನ ಅಳು, ಅವನು ಜೀವಂತವಾಗಿದ್ದಾನೆಂಬುದನ್ನು ಸೂಚಿಸುತ್ತದೆ. ದುಃಖವು ಉನ್ನತಿಯನ್ನು ಸಾಧಿಸಲು ದಾರಿಯಾಗಿದೆ ಮತ್ತು ಜೀವನದ ಅಸ್ತಿತ್ವದ ಸಂಕೇತವಾಗಿದೆ. ದುಃಖವಿಲ್ಲದೆ ಜೀವನವಿಲ್ಲ. ಅನಂತವನ್ನು ಪಡೆಯಲು ಹೊರಟ ಸಾಂತದ ರೋದನವೇ ದುಃಖವಾಗಿದೆ. ಆತ್ಮನನ್ನು ಪರಮಾತ್ಮನೊಂದಿಗೆ ಜೋಡಿಸುವಲ್ಲಿ ದುಃಖದ ಪಾತ್ರ ಹಿರಿದು. ದುಃಖ ಸೃಷ್ಟಿಯ ಮಧುರ ಆಶೀರ್ವಾದ. ಏಕೆಂದರೆ ಅದರಿಂದ ದೋಷವನ್ನು ದೂರಮಾಡುವ ಪ್ರಯತ್ನ ನಡೆಯುತ್ತಿದೆ. ದುಃಖದಿಂದ ಸ್ವಾನುಭೂತಿ ಹುಟ್ಟುತ್ತದೆ. ಅದು ಬಳಿಕ ಸಹಾನುಭೂತಿಯಾಗಿ ಮತ್ತು ಕೊನೆಯಲ್ಲಿ ಸರ್ವಾನುಭೂತಿಯಾಗಿ ಪರಿವರ್ತಿತವಾಗುತ್ತದೆ. ಆದ್ದರಿಂದ ದುಃಖಕ್ಕೆ ಹೆದರುವ ಬದಲು ಅದನ್ನು ಬರಮಾಡಿ ಕೊಳ್ಳೋಣ.

*(ಮುಂದುವರಿಯುವುದು)*

# ಮಾನವ ಜೀವನದ ಸರ್ವಕಾಲಿಕ ಪ್ರಶ್ನೆಗಳು – ಶ್ರೀರಾಮಕೃಷ್ಣರ ಉತ್ತರಗಳು

**ನಾಗೇಶ್ ರಾವ್ ಎಲ್.ಜಿ.**



ಆಧುನಿಕ ಜೀವನದಲ್ಲಿ ಎದುರಾಗುವ ಹತ್ತುಹಲವು ಸಮಸ್ಯೆಗಳಿಗೆ ಉತ್ತರ ಸಿಗದೆ ಪರಿತಪಿಸುವ ಜನರ ಸಂಖ್ಯೆ ದೊಡ್ಡದು. ಅನೇಕ ಸಮಸ್ಯೆಗಳು ಎಲ್ಲ ಕಾಲಕ್ಕೂ ಎದುರಾಗುವವು; ಅವುಗಳಿಗೆ ಪರಿಹಾರವೂ ಇದೆ. ಶ್ರೀರಾಮಕೃಷ್ಣರು ಪ್ರಾಚೀನ ಹಾಗೂ ಆಧುನಿಕ ಜೀವನದ ಕೊಂಡಿಯಂತೆ ಅನೇಕ ಮಂದಿ ಭಕ್ತರ ಸಮಸ್ಯೆಗಳಿಗೆ ಅತ್ಯುತ್ತಮ ಪರಿಹಾರಗಳನ್ನು ಸೂಚಿಸಿದ್ದಾರೆ. ಅವತಾರಶ್ರೇಷ್ಠರ ಈ ಬೋಧನೆಗಳ ಬಗ್ಗೆ ಬರೆದಿರುವ ಲೇಖಕರು ಬೆಂಗಳೂರು ಕೃಷಿ ವಿಶ್ವವಿದ್ಯಾಲಯದ ಸಹಾಯಕ ರಿಜಿಸ್ಟ್ರಾರ್ ಆಗಿ ಸೇವೆ ಸಲ್ಲಿಸಿ, ನಿವೃತ್ತರಾಗಿದ್ದಾರೆ. ಅವರು ಬೆಂಗಳೂರು ಆಶ್ರಮದ ಭಕ್ತರು; ಭಾಷಾಂತರವೇ ಮೊದಲಾದ ಹಲವು ಸಾಹಿತ್ಯಕ ಚಟುವಟಿಕೆಗಳಲ್ಲಿ ನಿರತರಾಗಿದ್ದಾರೆ. ಪ್ರಸ್ತುತ ಅವರು ಮೈಸೂರಿನಲ್ಲಿ ವಾಸವಾಗಿದ್ದಾರೆ.

ಪ್ರತಿಯೊಬ್ಬ ಅವತಾರ ಪುರುಷನೂ ಧರ್ಮ ಸಂಸ್ಥಾಪನೆಗೋಸ್ಕರ ಈ ಜಗತ್ತಿನಲ್ಲಿ ಮನುಷ್ಯ ರೂಪದಲ್ಲಿ ಹುಟ್ಟಿ ಬರುತ್ತಾನೆ. ಅವನು ಆಗಿನ ದೇಶಕಾಲ ಪರಿಸ್ಥಿತಿಗಳಿಗೆ ಅನುಸಾರವಾಗಿ ಸೂಕ್ತವಾದ ಉಪದೇಶಗಳನ್ನು ನೀಡುತ್ತಾನೆ; ಆದರ್ಶದ ಬಾಳನ್ನು ನಡೆಸಿ ಜನರಿಗೆ ಮಾದರಿಯಾಗುತ್ತಾನೆ. ಶ್ರೀಕೃಷ್ಣ, ಬುದ್ಧ, ಚೈತನ್ಯ, ನಾನಕ್, ಬಸವಣ್ಣ ಮೊದಲಾದವರು ಅದೇ ಕೆಲಸವನ್ನು ಮಾಡಿದರು. ಶ್ರೀರಾಮಕೃಷ್ಣರೂ ಅದೇ ಕೆಲಸವನ್ನು ಮಾಡಿದರು.

ಶ್ರೀರಾಮಕೃಷ್ಣರು ಪುಸ್ತಕಗಳನ್ನು ಬರೆಯಲಿಲ್ಲ. ವೇದಿಕೆಯ ಮೇಲೆ ನಿಂತು ಭಾಷಣಗಳನ್ನು ಮಾಡಲಿಲ್ಲ. ಶಾಸ್ತ್ರಗ್ರಂಥಗಳನ್ನು ಉದ್ಧರಿಸಿ ಪಾಂಡಿತ್ಯ ಪ್ರದರ್ಶನ ಮಾಡಲಿಲ್ಲ. ಆದರೂ ಶ್ರೇಷ್ಠ ಮಟ್ಟದ ಅವರ ಸಂನ್ಯಾಸಿ ಶಿಷ್ಯರು ಮತ್ತು ಗೃಹಸ್ಥ ಭಕ್ತರು ಅವರ ದಿವ್ಯ ಸಂದೇಶಗಳನ್ನು ಮನೆಮನೆಗೆ, ಮನಮನಕ್ಕೆ ಮುಟ್ಟಿಸಿದರು. ಶ್ರೀರಾಮಕೃಷ್ಣ ಮಹಾಸಂಘವು ನಿರಂತರ ಬೆಳೆಯುತ್ತಿದೆ. ದೇಶ ವಿದೇಶಗಳಲ್ಲಿ ಆಧ್ಯಾತ್ಮ ಪಿಪಾಸುಗಳು ಭರವಸೆಯ ಬೆಳಕನ್ನು ಪಡೆದು ಕೊಳ್ಳುತ್ತಿದ್ದಾರೆ, ಧನ್ಯರಾಗುತ್ತಿದ್ದಾರೆ.

''ದೇವರು ಸರ್ವಾಂತರ್ಯಾಮಿಯಾದರೂ ಅವನು ಮಾನವನ ಮೂಲಕ ನಮಗೆ ಗೋಚರವಾಗುವನು, ಶ್ರೀರಾಮಕೃಷ್ಣರ ವ್ಯಕ್ತಿತ್ವದಷ್ಟು ಪೂರ್ಣತೆಯನ್ನು ಪಡೆದ ವ್ಯಕ್ತಿತ್ವ ಮತ್ತೊಂದಿಲ್ಲ. ಅವರ ಜೀವನವೇ ಭರತಖಂಡದ ವಿಭಿನ್ನ ಸಂಪ್ರದಾಯಗಳ ಸಮನ್ವಯ ಕ್ಷೇತ್ರವಾಗಿತ್ತು.''[೧]

''ಹತ್ತೊಂಬತ್ತನೆಯ ಶತಮಾನದಲ್ಲಿ ಭಾರತವು ಒಂದು ಕಷ್ಟ ಪರಿಸ್ಥಿತಿಯನ್ನು ಸವಾಲನ್ನು ಎದುರಿಸಬೇಕಾಯಿತು. ಬ್ರಿಟಿಷರು ನಮ್ಮ ದೇಶವನ್ನು ಆಕ್ರಮಿಸಿದ ನಂತರ ಪಾಶ್ಚಿಮಾತ್ಯ ಸಂಸ್ಕೃತಿಯನ್ನು ಭಾರತದ ಮೇಲೆ ಹೇರುವ ಪ್ರಯತ್ನ ನಡೆಯಿತು. ಪಾಶ್ಚಿಮಾತ್ಯ ದೇಶದ ಬೆಡಗಿನ ಆಕರ್ಷಣೆಗೆ ಬೆರಗಾಗಿ ಭಾರತೀಯರು ಪಾಶ್ಚಿಮಾತ್ಯರಿಂದ ಬಂದಿದ್ದ ಎಲ್ಲವನ್ನೂ ಸ್ವಾಗತಿಸಿದರು; ಅಂಧಾನುಕರಣೆ ಮಾಡಿದರು. ಇದೇ ಸಂದರ್ಭದಲ್ಲಿ ಮತಾಂತರ ನಿರತವಾದ ಕ್ರೈಸ್ತಧರ್ಮವು ಮೌನವಾಗಿ ಭಾರತದ ನೆಲದ ಮೇಲೆ ಸಾಂಸ್ಕೃತಿಕ ಆಕ್ರಮಣ ಮಾಡಿತು. ಇಂತಹ ವಿಷಮ ಪರಿಸ್ಥಿತಿಯಲ್ಲಿ ಶ್ರೀರಾಮಕೃಷ್ಣರ ಆಗಮನವಾಯಿತು. ಅವರು ಭಾರತದ ಧರ್ಮ ಮತ್ತು ಅಂತಃಸತ್ವಗಳ ಮೂರ್ತರೂಪವಾಗಿದ್ದರು. ಆ ಕಾಲದಲ್ಲಿ ಹಿಂದುಗಳಿಗೆ ತಮ್ಮ ಧರ್ಮದಲ್ಲಿ ಶ್ರದ್ಧೆ, ನಂಬಿಕೆಗಳು ಕಡಿಮೆಯಾಗುತ್ತಿದ್ದವು. ಅಂತಹ ಕಾಲಘಟ್ಟದಲ್ಲಿ ಸನಾತನ ಧರ್ಮದ ಸೌಂದರ್ಯ, ಭವ್ಯತೆ ಮತ್ತು ಶಕ್ತಿಯ ಬಗ್ಗೆ ಶ್ರೀರಾಮಕೃಷ್ಣರು ಭಾರತೀಯರ ಕಣ್ಣುತೆರೆಸಿದರು... ಎಲ್ಲ ಧರ್ಮಗಳ ಸಾಧನ ವಿಧಾನಗಳನ್ನು ಅನುಸರಿಸಿ ಸಾಕ್ಷಾತ್ಕಾರವನ್ನು ಪಡೆದುಕೊಂಡರು, ಎಲ್ಲಧರ್ಮಗಳೂ ಸತ್ಯವೆಂದು ತಮ್ಮ ಸ್ವಂತ ಅನುಭವದಿಂದ ತಿಳಿಸಿರು.''[೨]

ಮಹೇಂದ್ರನಾಥಗುಪ್ತರು ('ಮ') ಶ್ರೀರಾಮಕೃಷ್ಣರ ಉಪದೇಶಾಮೃತವನ್ನು ಜಗತ್ತಿಗೆ 'ಕಥಾಮೃತ'ದ ರೂಪದಲ್ಲಿ ನೀಡಿದ

---

೧ ಶ್ರೀರಾಮಕೃಷ್ಣ – ಜೀವನ ಸಂದೇಶ, ೨೦೦೭, ಮುನ್ನುಡಿಯಲ್ಲಿ.

೨ ಅಲ್ಲೇ, ಪ್ರಸ್ತಾವನೆ, ಪು.೬–೭

ಮಹಾಪುರುಷರು. ಅದು 'ಶ್ರೀರಾಮಕೃಷ್ಣ ವಚನವೇದ'ದ ರೂಪದಲ್ಲಿ ಕನ್ನಡ ಓದುಗರಿಗೂ ದೊರೆತಿದೆ. 'ಮ' ರವರು ಮಾನವ ಬದುಕಿನ ನಾಲ್ಕು ಮುಖ್ಯ ಪ್ರಶ್ನೆಗಳನ್ನು ಶ್ರೀರಾಮಕೃಷ್ಣರಲ್ಲಿ ಕೇಳಿದರು. ಅವರು ಆ ಪ್ರಶ್ನೆಗಳನ್ನು ನಮ್ಮೆಲ್ಲರ ಪರವಾಗಿ ಕೇಳಿದ್ದಾರೆ ಎಂದರೆ ತಪ್ಪಾಗಲಾರದು. ಭಗವದ್ಗೀತೆಯಲ್ಲಿ ಅರ್ಜುನನು ಕೇಳುವ ಪ್ರಶ್ನೆಗಳೂ ಸರ್ವಜನಾಂಗದ ಸರ್ವಕಾಲಿಕ ಮಾನವ ಜೀವನಕ್ಕೆ ಸಂಬಂಧಿಸಿದ ಪ್ರಶ್ನೆಗಳು. ಹಾಗೆಯೇ ಮಾಸ್ಟರ್ ಮಹಾಶಯರ ಪ್ರಶ್ನೆಗಳೂ ಕೂಡ ಪ್ರಸ್ತುತವಾದವು. ಅವು ಹೀಗಿವೆ:

೧. ಭಗವಂತನ ಮೇಲೆ ಮನಸ್ಸನ್ನು ಇಡುವುದು ಹೇಗೆ?

೨. ಪ್ರಪಂಚದಲ್ಲಿ ನಾವು ಹೇಗೆ ಜೀವಿಸಬೇಕು?

೩. ದೇವರನ್ನು ನೋಡುವುದು ಸಾಧ್ಯವೆ?

೪. ಏನು ಮಾಡಿದರೆ ನಾವು ದೇವರನ್ನು ಕಾಣಬಹುದು?''[೩]

ಅತ್ಯಂತ ಗಂಭೀರವಾದ ಈ ಪ್ರಶ್ನೆಗಳಿಗೆ ಶ್ರೀರಾಮಕೃಷ್ಣರು ಸ್ವಾನುಭವದ ಆಧಾರದ ಮೇಲೆ ಸರಳವಾದ ಮಾತುಗಳಲ್ಲಿ ಉತ್ತರಗಳನ್ನು ನೀಡಿರುತ್ತಾರೆ. ಅವರು ಶಾಸ್ತ್ರಗ್ರಂಥಗಳನ್ನು ಉದ್ಧರಿಸಿ ಹೇಳುವುದಿಲ್ಲ, ಆದರೆ ಅವುಗಳ ಸಾರ ಸರ್ವಸ್ವವೇ ಅವರ ವಾಣಿಯಲ್ಲಿ ಬರುತ್ತದೆ. 'ಶ್ರೀರಾಮಕೃಷ್ಣ ವಚನವೇದ'ದ ಪುಟಪುಟಗಳಲ್ಲಿ ಈ ಉತ್ತರಗಳನ್ನು ನಾವು ಕಾಣುತ್ತೇವೆ. ಅವುಗಳನ್ನು ಅವರ ಮಾತುಗಳಲ್ಲಿಯೇ ಇಲ್ಲಿ ಸಂಗ್ರಹಿಸಿ ಕೊಡಲಾಗಿದೆ.

ಮಾಸ್ಟರ್ ಮಹಾಶಯ ವಿನಯದಿಂದ ಕೇಳಿದರು: ''ಒಳ್ಳೆಯದು, ಏನು ಮಾಡಿದರೆ ಭಗವಂತನ ಕಡೆ ಮನಸ್ಸು ಹರಿಯಲಾರಂಭಿಸುತ್ತದೆ?'' ಶ್ರೀರಾಮಕೃಷ್ಣರು: ''ಭಗವಂತನ ನಾಮ ಗುಣ ಕೀರ್ತನಗಳನ್ನು ಸರ್ವದಾ ಮಾಡುತ್ತಿರಬೇಕು, ಮನಸ್ಸು ಹಗಲಿರುಳೂ ಸಂಸಾರದಲ್ಲೇ, ಪ್ರಾಪಂಚಿಕ ಕೆಲಸ ಕಾರ್ಯಗಳಲ್ಲೇ ನಿರತವಾಗಿ ಬಿಟ್ಟಿದ್ದರೆ ಅದು ಭಗವನ್ಮುಖವಾಗಲಾರದು. ಆಗಾಗ ನಿರ್ಜನ ಪ್ರದೇಶಕ್ಕೆ ಹೋಗಿ ಭಗವದ್‌ಧ್ಯಾನದಲ್ಲಿ ತೊಡಗುವುದು ಅತ್ಯಂತ ಆವಶ್ಯಕ. ಮೊದಮೊದಲು ಪದೇ ಪದೇ ನಿರ್ಜನ ಪ್ರದೇಶಕ್ಕೆ ಹೋಗಿ ಆತನ ಧ್ಯಾನ ಮಾಡದೆ ಇದ್ದರೆ ಮನಸ್ಸನ್ನು ನಿಲ್ಲಿಸುವುದು ದುಸ್ಸಾಧ್ಯ. ಗಿಡ ಇನ್ನೂ ಸಸಿಯಾಗಿರುವಾಗ ಅದರ ಸುತ್ತಲೂ ಬೇಲಿ ಕಟ್ಟಬೇಕು. ಇಲ್ಲದಿದ್ದರೆ ದನಕರುಗಳು ಆಡು, ಕುರಿಗಳು ತಿಂದು ನಾಶ ಮಾಡಿಬಿಡುತ್ತವೆ''

''ಹರಿಸ್ಮರಣೆ ಮಾಡೋ ನಿರಂತರ'' ಎಂದು ವಾದಿರಾಜ ಸ್ವಾಮಿಗಳು ಹಾಡಿದ್ದಾರೆ. ಯಾವಾಗಲೋ ಆಗೊಮ್ಮೆ ಈಗೊಮ್ಮೆ ದೇವರನ್ನು ನೆನೆದರೆ ಸಾಲದು. ಹಾಗಾದರೆ ಪ್ರಾಪಂಚಿಕತೆ ನಮ್ಮನ್ನು ಆವರಿಸಿಕೊಂಡು ಬಿಡುತ್ತದೆ. ನಾವು ಪ್ರಾಪಂಚಿಕತೆಯಲ್ಲಿ ಮುಳುಗಿ ಬಿಡುತ್ತೇವೆ.

ಮತ್ತೆ ಮಾಸ್ಟರ್ ಮಹಾಶಯನು ವಿನಯದಿಂದ ಶ್ರೀರಾಮಕೃಷ್ಣರನ್ನು ಕೇಳುತ್ತಾನೆ: ''ಸಂಸಾರದಲ್ಲಿ ಯಾವ ರೀತಿಯಾಗಿ ಇರಬೇಕು?''

ಶ್ರೀರಾಮಕೃಷ್ಣರು: ''ಎಲ್ಲಾ ಕೆಲಸ ಕಾರ್ಯಗಳನ್ನು ಮಾಡು. ಆದರೆ ಮನಸ್ಸನ್ನು ಮಾತ್ರ ಭಗವಂತನ ಪಾದಪದ್ಮಗಳಲ್ಲಿ ಇಡು. ಎಲ್ಲರೊಡನೆ ಅಂದರೆ ಹೆಂಡತಿ, ಮಕ್ಕಳು, ತಂದೆತಾಯಿ ಇವರೊಡನೆ ಇರು, ಅವರ ಸೇವೆ ಮಾಡು, ಅವರೆಲ್ಲಾ ನಿನ್ನ ಪರಮಾಪ್ತರೆಂದೇ ಕಾಣು. ಆದರೆ ಅವರಾರೂ ನಿನಗೆ ಸೇರಿದವರಲ್ಲ ಎಂಬುದು ಹೃದಯಾಂತರಾಳದಲ್ಲಿ ನೆಲೆಸಿರಲಿ.''

ಶ್ರೀರಾಮಕೃಷ್ಣರ ಗೃಹೀ ಭಕ್ತರಲ್ಲಿ ಅನೇಕರು ಇಂತಹ ಶ್ರೇಷ್ಠ ಸಾಧಕರಾಗಿದ್ದರು. ಅವರಲ್ಲಿ ಮಾಸ್ಟರ್ ಮಹಾಶಯನೂ ಒಬ್ಬ ಪ್ರಮುಖ ಭಕ್ತನಾಗಿದ್ದನು.

''ಶ್ರೀಮಂತರ ಮನೆಯ ದಾಸಿ ಎಲ್ಲ ಕೆಲಸಕಾರ್ಯಗಳನ್ನೂ ಮಾಡುತ್ತಾಳೆ. ಆದರೆ ಆಕೆಯ ಮನಸ್ಸು ಮಾತ್ರ ಹಳ್ಳಿಯಲ್ಲಿರುವ ತನ್ನ ಮನೆಯ ಕಡೆಗೇ. ಯಜಮಾನನ ಮಕ್ಕಳನ್ನು ತನ್ನ ಮಕ್ಕಳಂತೆಯೇ ಬೆಳೆಸುತ್ತಾಳೆ. ಅಷ್ಟೇ ಅಲ್ಲ, ಅವನ್ನು 'ನನ್ನ ಹರಿ, ನನ್ನ ರಾಮ' ಎಂಬುದಾಗಿ ಕರೆಯುತ್ತಾಳೆ. ಆದರೆ ಅವು ಯಾವುವೂ ತನ್ನದಲ್ಲವೆಂಬುದು ಆಕೆಯ ಹೃದಯದಲ್ಲಿ ಚೆನ್ನಾಗಿ ಗೊತ್ತಿದೆ.

''ಆಮೆ ನೀರಿನಲ್ಲಿ ಈಜಾಡುತ್ತಿರುತ್ತದೆ. ಆದರೆ ಅದರ ಮನಸ್ಸೆಲ್ಲಿದೆ ಗೊತ್ತೇ ನಿನಗೆ? ತನ್ನ ಮೊಟ್ಟೆಗಳಿರುವ ದಡದಲ್ಲಿ, ಸಂಸಾರದಲ್ಲಿ ಎಲ್ಲ ಕೆಲಸಗಳನ್ನು ಮಾಡು, ಆದರೆ ಮನಸ್ಸನ್ನು ಮಾತ್ರ ಭಗವಂತನಲ್ಲಿಡು.''

ಎಂತಹ ಸುಂದರ ಉದಾಹರಣೆಗಳು! ಒಮ್ಮೆ ಕೇಳಿದರೆ ಮನಸ್ಸಿನಲ್ಲಿ ಅಚ್ಚಳಿಯದಂತೆ ಇರುತ್ತವೆ. ಸರಳ ರೀತಿಯಲ್ಲಿ ಗಹನ ವಿಷಯಗಳನ್ನು ತಿಳಿಸುವುದು ಶ್ರೀರಾಮಕೃಷ್ಣರ ಅದ್ವಿತೀಯತೆ.

''ಮೊದಲು ಕೈಗೆ ಎಣ್ಣೆ ಸವರಿಕೊಂಡು ಹಲಸಿನ ಹಣ್ಣನ್ನು ಬಿಡಿಸಬೇಕು. ಇಲ್ಲದಿದ್ದರೆ ಕೈಗೆ ಅಂಟು ಹತ್ತಿಕೊಂಡು ಬಿಡುತ್ತದೆ. ಭಗವದ್ ಭಕ್ತಿಯೆಂಬ ಎಣ್ಣೆಯನ್ನು ಮೊದಲು ಹವಣಿಸಿಕೊಂಡು ಬಳಿಕ ಸಾಂಸಾರಿಕ ಕೆಲಸ ಕಾರ್ಯಗಳಲ್ಲಿ ಕೈಯಿಡಬೇಕು.''

''ನೋಡು, ನಿರ್ಜನ ಪ್ರದೇಶಕ್ಕೆ ಹೋಗಿ ಈ ಮನಸ್ಸನ್ನು ಭಗವಂತನ ಧ್ಯಾನದಲ್ಲಿ ತೊಡಗಿಸುವುದಾದರೆ, ಅದು ಜ್ಞಾನ ಭಕ್ತಿ ವೈರಾಗ್ಯ — ಇವುಗಳನ್ನು ಗಳಿಸಿಕೊಳ್ಳುತ್ತದೆ. ಸಂಸಾರದಲ್ಲಿ ತೊಡಗಿಸುವುದಾದರೆ ಇದೇ ಮನಸ್ಸು ಅಧೋಗತಿಗೆ ಇಳಿದು ಬಿಡುತ್ತದೆ. ಸಂಸಾರದಲ್ಲಿ ಕೇವಲ ಚಿಂತನೆ.''

ಪರಮಹಂಸರ ಈ ಮಾತುಗಳು ಪುರಂದರದಾಸರ ಪದವೊಂದನ್ನು ನೆನಪಿಗೆ ತರುತ್ತದೆ:

---

೩. ದೇವರೊಡನೆ ಬಾಳಿದವರು, ಭಾಗ ೨, ಪು. ೨೦೬

ಹಾಂಗೆ ಇರಬೇಕು ಸಂಸಾರದಲ್ಲಿ
ಹ್ಯಾಂಗೆ ಬರೆದಿತ್ತೋ ಪ್ರಾಚೀನದಲ್ಲಿ ॥

ಪಕ್ಷಿ ಅಂಗಳದಲ್ಲಿ ಬಂದು ಕೂತಂತೆ
ಆ ಕ್ಷಣದಲ್ಲಿ ಹಾರಿ ಹೋದಂತೆ ॥

ನೀರ ಮೇಲಣ ಗುಳ್ಳೆಯಂತಹ ಕ್ಷಣಭಂಗುರವಾದ ಈ ಬಾಳಿನಲ್ಲಿ ಎಷ್ಟು ಆಸೆಗಳು! ಎಷ್ಟು ಬಯಕೆಗಳು! ಮನುಷ್ಯನನ್ನು ಈ ಬಯಕೆಯ ಬಳ್ಳಿ ಕಟ್ಟಿ ಕೆಡಹುತ್ತದೆ. ಅದಕ್ಕೆ ಎಚ್ಚರದಿಂದ ನಡೆಯಬೇಕು, ಸದಾ ಭಗವಂತನನ್ನು ಮರೆಯದಂತಿರಬೇಕು.

ಮುಂದೆ ಮಾಸ್ಟರ್ ಮಹಾಶಯನು ಇನ್ನೊಂದು ಮುಖ್ಯ ಪ್ರಶ್ನೆಯನ್ನು ಕೇಳುತ್ತಾನೆ. ಅದು ಹೀಗಿದೆ: ''ಭಗವಂತನ ದರ್ಶನವನ್ನು ಮಾಡಲಾಗುವುದೆ?'' ಶ್ರೀರಾಮಕೃಷ್ಣರು: ''ಹೌದು ನಿಸ್ಸಂದೇಹವಾಗಿ, ಆಗಾಗ ಏಕಾಂತವಾಸ, ಆತನ ನಾಮಗುಣಕೀರ್ತನೆ, ವಸ್ತುವಿಚಾರ – ಈ ಸಾಧನೆಗಳನ್ನು ಅವಲಂಬಿಸಬೇಕಾಗುತ್ತದೆ.''

ಮಾಸ್ಟರ್: ''ಯಾವ ಮಾನಸಿಕ ಅವಸ್ಥೆಯಲ್ಲಿ ಆತನ ದರ್ಶನ ದೊರೆಯುತ್ತದೆ?''

ಶ್ರೀರಾಮಕೃಷ್ಣರು: ''ಅತ್ಯಂತ ವ್ಯಾಕುಲನಾಗಿ ಅತ್ತರೆ ಅವನ ದರ್ಶನ ಪಡೆಯಲು ಸಾಧ್ಯ, ಹೆಂಡತಿ ಮಕ್ಕಳಿಗಾಗಿ ಬಿಂದಿಗೆ ತುಂಬಾ ಕಣ್ಣೀರು ಸುರಿಸುತ್ತಾರೆ, ಕಣ್ಣೀರ ಸಾಗರದಲ್ಲೇ ತೇಲಾಡಿಬಿಡುತ್ತಾರೆ. ಹಣಕ್ಕಾಗಿ, ಆದರೆ ಭಗವಂತ ಬೇಕೆಂದು ಯಾರು ತಾನೇ ಕಣ್ಣೀರಿಡುತ್ತಾರೆ? ಸಹಜ ಕರೆಯಿಂದ ಆತನನ್ನು ಕರೆಯಬೇಕು?'' ಪರಮಹಂಸರು ತಮ್ಮ ಮಧುರ ಕಂಠದಿಂದ ಹಾಡಲಾರಂಬಿಸಿದರು:

ನಂಬಿ ಕರೆದರೆ ತಾಯಿ ಓ ಎನ್ನದಿಹಳೇನೊ?
ನಿನ್ನ ತೊರೆದವಳೆಂತು ಇರಬಲ್ಲಳೊ?
ಬಿಲ್ವದಳ ಹೂಗಳ ತಂದು ಪಾದಕೆ ಮುಡಿಸೋ
ನಿನ್ನ ಭಕ್ತಿಯ ಗಂಧದೊಡನೆ...

''ವ್ಯಾಕುಲತೆ ಉಂಟಾಯಿತು ಎಂದರೆ ಅರುಣೋದಯವಾದ ಹಾಗೆ. ಬಳಿಕ ಸೂರ್ಯೋದಯ, ವ್ಯಾಕುಲತೆ ಬಂದ ನಂತರವೇ ಭಗವತ್‌ದರ್ಶನ.''

''ವಿಷಯಿಗೆ ವಿಷಯಗಳ ಮೇಲಿರುವ ಪ್ರೀತಿ, ತಾಯಿಗೆ ಮಗುವಿನ ಮೇಲಿರುವ ಪ್ರೀತಿ, ಸತಿಗೆ ಪತಿ ಮೇಲಿರುವ ಪ್ರೀತಿ – ಈ ಮೂರೂ ಪ್ರೀತಿಗಳು ಯಾರಲ್ಲೇ ಆಗಲಿ ಒಟ್ಟಿಗೆ ಮೂಡಿದರೆ ಅವುಗಳ ಜೋರಿನಿಂದ ಭಗವಂತನ ಸಾಕ್ಷಾತ್ಕಾರ ಸಾಧ್ಯವಾಗುತ್ತದೆ.''

''ವ್ಯಾಕುಲನಾಗಿ ಆತನನ್ನು ಕರೆಯಬೇಕು. ಬೆಕ್ಕಿನ ಮರಿಗೆ ಕೇವಲ ''ಮಿಯಾವ್, ಮಿಯಾವ್'' ಅಂತ ತನ್ನ ತಾಯಿಯನ್ನು ಕರೆಯುವುದೊಂದೇ ಗೊತ್ತು, ತಾಯಿ ಅದನ್ನು ಎಲ್ಲಿ ಇಡುವುದೋ ಅಲ್ಲೇ ಬಿದ್ದಿರುತ್ತದೆ. ಕೆಲವು ವೇಳೆ ಅಡಿಗೆ ಮನೆಯಲ್ಲಿ, ಕೆಲವು ವೇಳೆ ನೆಲದ ಮೇಲೆ, ಮತ್ತೆ ಕೆಲವು ವೇಳೆ ಹಾಸಿಗೆಯ ಮೇಲೆ ಇಡುತ್ತದೆ. ಅದಕ್ಕೇನಾದರೂ ತೊಂದರೆ ಬಂದರೆ ಅದು ಕೇವಲ 'ಮಿಯಾವ್, ಮಿಯಾವ್' ಅಂತ ಕೂಗುತ್ತದೆ. ತಾಯಿ ಬೆಕ್ಕು ಎಲ್ಲಿದ್ದರೆ ತಾನೆ ಏನು? ಈ ಮಿಯಾವ್ ಎಂಬ ಶಬ್ದವನ್ನು ಕೇಳಿದೊಡನೆಯೇ ಮರಿಯ ಹತ್ತಿರಕ್ಕೆ ಬಂದುಬಿಡುತ್ತದೆ.''

ಇದನ್ನು ಶಾಸ್ತ್ರದಲ್ಲಿ 'ಮಾರ್ಜಾಲ ಕಿಶೋರ ನ್ಯಾಯ' ಎಂದು ಹೇಳುತ್ತಾರೆ. ಭಕ್ತನಾದವನು ಆರ್ತನಾಗಿ, ಶ್ರದ್ಧೆಯಿಂದ ಭಗವಂತನಲ್ಲಿ ಮೊರೆಯಿಡಬೇಕು. ಅವನಿಗೆ ಕರೆಯುವುದೊಂದೇ ಗೊತ್ತು. ಅವನಲ್ಲಿ ನಂಬಿಕೆಯಿದೆ, ಶ್ರದ್ಧೆಯಿದೆ, ಅದು ಅವನನ್ನು ಗುರಿ ಮುಟ್ಟಿಸುತ್ತದೆ.

''ಶ್ರದ್ಧಾವಂತನೂ, ಜಿತೇಂದ್ರಿಯನೂ ಮತ್ತು ಸಾಧನಾ ಪರಾಯಣನಾದವನೂ ಜ್ಞಾನವನ್ನು ಪಡೆಯುತ್ತಾನೆ. ಜ್ಞಾನವನ್ನು ಪಡೆದುಕೊಂಡ ಕೂಡಲೇ ಭಗವತ್ ಸಾಕ್ಷಾತ್ಕಾರವೆಂಬ ಪರಮ ಶಾಂತಿಯನ್ನು ಪಡೆದುಕೊಳ್ಳುತ್ತಾನೆ'' ಎಂದು ಭಗವದ್ಗೀತೆಯ ನಾಲ್ಕನೆಯ ಅಧ್ಯಾಯದ ೩೯ನೆಯ ಶ್ಲೋಕದಲ್ಲಿ ಹೇಳಿದೆ.

ಪರಮಹಂಸರು ಮಾಸ್ಟರ್ ಮಹಾಶಯನಿಗೆ ಹೇಳಿದರು: ''ತಿಳಿದುಕೋ, ನಿರಾಕಾರವೂ ಸತ್ಯ, ಸಾಕಾರವೂ ಸತ್ಯ; ಯಾವುದರಲ್ಲಿ ವಿಶ್ವಾಸವೋ ಅದರಲ್ಲಿ ದೃಢಬುದ್ಧಿ ಇಡು.''

ಭಗವದ್‌ಗೀತೆಯ ೭ನೆಯ ಅಧ್ಯಾಯದ ಇಪ್ಪತ್ತೊಂದನೆಯ ಶ್ಲೋಕವನ್ನು ಇಲ್ಲಿ ಸ್ಮರಿಸಬಹುದು. ಶ್ರೀಕೃಷ್ಣನು ಹೇಳುತ್ತಾನೆ,

**ಯೋ ಯೋ ಯಾಂ ಯಾಂ ತನುಂ ಭಕ್ತಃ ಶ್ರದ್ಧಾಯಾರ್ಚಿತುಮಿಚ್ಛತಿ ।
ತಸ್ಯತಸ್ಯಾಚಲಂ ಶ್ರದ್ಧಾಂ ತಾಮೇವ ವಿದಧಾಮ್ಯಹಮ್ ॥**

''ಯಾವ ಯಾವ ಸಕಾಮಿ ಭಕ್ತನು ಯಾವ ಯಾವ ದೇವತಾ ಸ್ವರೂಪವನ್ನು ಶ್ರದ್ಧೆಯಿಂದ ಆರಾಧಿಸಲು ಇಚ್ಛಿಸುತ್ತಾನೋ, ಆಯಾ ಭಕ್ತನ ಶ್ರದ್ಧೆಯನ್ನು ಅದೇ ದೇವತೆಯಲ್ಲಿ ನಾನು ಸ್ಥಿರಪಡಿಸುತ್ತೇನೆ.''

ಬ್ರಹ್ಮ ಚೈತನ್ಯವೇ ಜಗತ್ತಾಗಿ ವ್ಯಕ್ತವಾಗಿದೆ. ಇದು ಭಗವಂತನ ಲೀಲಾಕ್ಷೇತ್ರ. ಆ ದೇವನನ್ನು ಧ್ಯಾನಾವಸ್ಥೆಯಲ್ಲಿರುವ ಮುನಿಗಳು ಭಾವಾತೀತವಾದ ಸಮಾಧಿಯಲ್ಲಿ ದರ್ಶನ ಮಾಡಿಕೊಳ್ಳುತ್ತಾರೆ. **''ಧ್ಯಾನಾವಸ್ಥಿತ ತದ್ಗತೇನ ಮನಸಾ ಪಶ್ಯಂತಿ ಯಂ ಯೋಗಿನಃ – ದೇವಾಯ ತಸ್ಮೈ ನಮಃ''** ಶ್ರೀರಾಮಕೃಷ್ಣರು ತೋತಾಪುರಿ ಗುರುಗಳ ಮಾರ್ಗದರ್ಶನದಲ್ಲಿ ಅದ್ವೈತ ದರ್ಶನವನ್ನೂ ಪಡೆದುಕೊಂಡರು. ನಮ್ಮ ಅಂತಃಕರಣವು ಶುದ್ಧವಾಗಿ, ತೀವ್ರ ವ್ಯಾಕುಲತೆ ಉಂಟಾದಾಗ ನಾವು ಭಗವಂತನನ್ನು ಕಾಣುತ್ತೇವೆ. ಆಗ ನಾವು ಎಲ್ಲೆಲ್ಲೂ ಇರುವ, ಎಲ್ಲವೂ ತಾನಾಗಿರುವ ಭಗವಂತನ್ನು ಕಾಣಬಹುದು, ಕಾಣಬೇಕು.

ಯುಗಾವತಾರ ಶ್ರೀರಾಮಕೃಷ್ಣರ ಕೃಪೆಯಿಂದ ಅದು ಸಾಧ್ಯ. ಅದಕ್ಕಾಗಿ ಪ್ರಾರ್ಥಿಸೋಣ. 

# ಆಧ್ಯಾತ್ಮಿಕ ಜೀವನದ ಸಾರಸೂತ್ರ

## (ಮುಂಡಕೋಪನಿಷತ್ತಿನ ಕತೆ)

ಸ್ವಾಮಿ ವೀರೇಶಾನಂದ

ವೇದಗಳ ಅಂತಿಮ ಭಾಗವಾಗಿ ಬರುವ ಉಪನಿಷತ್ತುಗಳಲ್ಲಿ ಅತ್ಯುನ್ನತ ವಿಚಾರಗಳು ಸರಳ ಹಾಗೂ ಸುಂದರವಾದ ಕಥೆಗಳ ಮೂಲಕ ವಿವರಿಸಲ್ಪಟ್ಟಿವೆ. ಅಥರ್ವವೇದಕ್ಕೆ ಸೇರಿರುವ ಮುಂಡಕೋಪನಿಷತ್ತಿನಲ್ಲಿ ಹಲವು ಕಥೆಗಳು, ರೂಪಕಗಳು, ದೃಷ್ಟಾಂತಗಳು ತತ್ತ್ವವಿವರಣೆಗಾಗಿ ಬಂದಿವೆ. ಈ ಸಂಚಿಕೆಯಲ್ಲಿ ಉಪನಿಷತ್ತಿನ ಸಾರವನ್ನು ಇನ್ನೊಂದು ಕಥೆಯ ಮೂಲಕ ವಿವರಿಸಲಾಗಿದೆ.

ಭಾರತೀಯ ತತ್ತ್ವಜಿಜ್ಞಾಸೆಯಲ್ಲಿನ ಎರಡು ಮುಖ್ಯಪದಗಳೆಂದರೆ 'ಸಾಧ್ಯ' ಮತ್ತು 'ಸಾಧನ.' ಸಾಧ್ಯವೆಂದರೆ ಆಧ್ಯಾತ್ಮಿಕ ಧ್ಯೇಯ. ಸಾಧನವೆಂದರೆ, ಆ ಗುರಿಯನ್ನು ತಲುಪಲು ಕೈಗೊಳ್ಳಬೇಕಾದ ಆಧ್ಯಾತ್ಮಿಕ ಸಾಧನೆಗಳು. ಮುಂಡಕೋಪನಿಷತ್ತಿನ ಮೊದಲ ಭಾಗದಲ್ಲಿ ಆತ್ಮಜ್ಞಾನವೇ ಸಾಧ್ಯವೆಂಬ ಮುಖ್ಯವಾದ ಅಂಶವನ್ನು ಬಿಂಬಿಸಲಾಗಿದೆ. ಇದನ್ನೇ ಉತ್ಕೃಷ್ಟ ವಿದ್ಯೆ ಅಥವಾ ಪರಾವಿದ್ಯೆಯೆಂದು ಪ್ರಶಂಸಿಸಲಾಗಿದೆ. ಎರಡನೆಯ ಭಾಗದಲ್ಲಿ ಈ ಆತ್ಮಜ್ಞಾನವನ್ನು ಪಡೆಯುವುದಕ್ಕೆ ಸಾಧಕನು ಕೈಗೊಳ್ಳಬೇಕಾದ ಸಾಧನೆಗಳನ್ನು ಕುರಿತು ಗುರುವು ಶಿಷ್ಯನ ಗಮನವನ್ನು ಸೆಳೆಯುತ್ತಾನೆ.

### ಪರಾಮೃತ ಸ್ಥಿತಿ

ಯಶಸ್ವೀ ಗೃಹಸ್ಥನಾದ ಶೌನಕನು ಗುರುವಾದ ಅಂಗಿರಸನಲ್ಲಿ ಉಪದೇಶವನ್ನು ಪಡೆಯುತ್ತಿದ್ದಾನೆ. ''ಮಗೂ ಶೌನಕ, ಈ ಜಗತ್ತೆಲ್ಲವೂ ಬ್ರಹ್ಮವಸ್ತುವಿನಿಂದಲೇ ಆವೃತವಾಗಿದೆ. ನಾವು ಮಾಡುವ ತಪಸ್ಸು , ಕರ್ಮಗಳು - ಎಲ್ಲವೂ ಈ ಪುರುಷನೇ ಆಗಿದ್ದಾನೆ. ಅವನನ್ನು ಪಡೆಯುವುದೇ ಪರಮಾಮೃತ ಸ್ಥಿತಿಯಾಗಿದೆ. ಸರ್ವಜೀವಿಗಳ ಹೃದಯಗುಹೆಯಲ್ಲಿ ನೆಲೆಸಿರುವ ಈ ಪರಮಾತ್ಮನನ್ನು ಯಾರು ಅರಿತುಕೊಳ್ಳುತ್ತಾರೋ, ಅವನ ಅವಿದ್ಯಾಗ್ರಂಥಿಯು ಸಂಪೂರ್ಣವಾಗಿ ಬಿಚ್ಚಿಹೋಗುತ್ತದೆ; ಮನಸ್ಸಿನಲ್ಲಿರುವ ಎಲ್ಲ ಅವಿದ್ಯಾವಾಸನೆಯೂ ನಾಶವಾಗುತ್ತದೆ.

''ಈ ಅಕ್ಷರಬ್ರಹ್ಮಕ್ಕೆ ಯಾವ ರೂಪವೂ ಇಲ್ಲ. ಹೀಗಾಗಿ ಇದನ್ನು ತಿಳಿದುಕೊಳ್ಳುವುದು ಹೇಗೆ ಎಂದು ಕೇಳುವೆಯೇನು? ಈ ಬ್ರಹ್ಮವು ನಮ್ಮಲ್ಲಿಯೇ ಅಡಗಿಕೊಂಡಿದೆ. ನಾವು ಮಾಡುತ್ತಿರುವ ಎಲ್ಲ ಕ್ರಿಯೆಗಳನ್ನು ಬೆಳಗುತ್ತಿರುವುದೇ ಅದು. ನೋಡುತ್ತಿರುವುದು, ಕೇಳುವುದು, ಆಲೋಚಿಸುವುದು, ಅರಿತುಕೊಳ್ಳುವುದು - ಇವುಗಳ ಮೂಲಕ ಹೊರಹೊಮ್ಮುತ್ತಿರುವ ಅರಿವು ಅಥವಾ ಚೈತನ್ಯದ ಬೆಳಕಿದೆಯಲ್ಲಾ, ಅದೇ ಆತ್ಮ ಅಥವಾ ಬ್ರಹ್ಮ. ಈ ಕ್ರಿಯೆಗಳೆಲ್ಲ ಆತ್ಮನಿಗೆ ಉಪಾಧಿಗಳು. ಆದ್ದರಿಂದಲೇ ನಾವು ಆತ್ಮನ ನಿಜವಾದ ರೂಪವನ್ನು ಅರಿಯಲು ಸಾಧ್ಯವಾಗಿಲ್ಲ. ಹೀಗೆ ಈ ಬ್ರಹ್ಮವು ನಮ್ಮ ಹತ್ತಿರದಲ್ಲಿಯೇ ಇರುತ್ತದೆ ಮತ್ತು ಹಲವಾರು ಕ್ರಿಯೆಗಳ ಮೂಲಕ ಗುರುತು ಹಿಡಿಯದೆ ಸಂಚರಿಸುತ್ತಿರುತ್ತದೆ. ಹೀಗಾಗಿ ಇದನ್ನು 'ಗುಹಾಚರ' ಎನ್ನುತ್ತಾರೆ. ಹೀಗೆ ಎಲ್ಲಕ್ಕೂ ಆಧಾರವಾಗಿರುವ, ನಿಮ್ಮ ಆತ್ಮವೇ ಆಗಿರುವ ಆತ್ಮವೇ ಬ್ರಹ್ಮವು ಎಂಬ ಸತ್ಯವನ್ನು ತಿಳಿದುಕೊಳ್ಳಿರಿ. ಬಯಸುವುದಿದ್ದರೆ ಇದನ್ನು ಬಯಸಬೇಕು. ಇದು ಲೋಕದಲ್ಲಿ ಕಂಡುಬರುವ ಎಲ್ಲ ಬಗೆಯ ಜ್ಞಾನಕ್ಕೂ ಮಿಗಿಲಾದುದು; ಉತ್ತಮವಾದ ಪದಾರ್ಥಗಳೆಲ್ಲದಕ್ಕಿಂತ ಉತ್ತಮವಾದುದು.

''ಆತ್ಮವು ಚೈತನ್ಯವೆಂಬ ದಿವ್ಯವಾದ ಪ್ರಕಾಶವುಳ್ಳದ್ದು. ಅಣುಗಳಿಗಿಂತಲೂ ಅಣುವಾಗಿರುವುದು. ಇದು ಎಲ್ಲವನ್ನೂ ಒಳಗೊಂಡದ್ದು. ಎಲ್ಲ ಲೋಕಗಳೂ, ಆ ಲೋಕದಲ್ಲಿ ವಾಸಮಾಡುವ ಜೀವಿಗಳು - ಎಲ್ಲರೂ ಈ ಆತ್ಮವಸ್ತುವಿನಲ್ಲಿಯೇ ಅಡಕವಾಗಿದ್ದಾರೆ. ಇದನ್ನೇ ಬ್ರಹ್ಮವೆಂದೂ, ಅಕ್ಷರವೆಂದೂ ಕರೆಯುತ್ತಾರೆ. ಎಲ್ಲ ಜೀವರಾಶಿಗಳಿಗೂ ಚೈತನ್ಯವೇ ಆಶ್ರಯವಷ್ಟೇ. ಅಂಥ ಚೈತನ್ಯರೂಪನೇ ಈ ಭಗವಂತನು. ಅವನೇ ಚೈತನ್ಯಕ್ರಿಯೆಗಳಾದ ಪ್ರಾಣ, ವಾಕ್ಕು ಮತ್ತು ಮನಸ್ಸುಗಳ ರೂಪದಲ್ಲಿ ವ್ಯಕ್ತನಾಗುತ್ತಾನೆ. ಅಂದರೆ ಈ ಎಲ್ಲ ಕ್ರಿಯೆಗಳಲ್ಲಿ ಕಾಣಬರುವ ಚೈತನ್ಯವು ಈ ಶುದ್ಧ ಬ್ರಹ್ಮವೇ ಆಗಿದೆ.''

### ಧ್ಯಾನ ಪ್ರಕ್ರಿಯೆ

ಇಷ್ಟು ಹೇಳಿ, ಗುರು ಅಂಗಿರಸರು ಒಂದು ಅದ್ಭುತವಾದ ಉಪದೇಶವನ್ನು ಮಾಡುತ್ತಾರೆ: ''ಮಗೂ ಅದನ್ನು ಹೊಡೆಯಬೇಕು. ಅದಕ್ಕೆ ಗುರಿಯಿಟ್ಟು ಹೊಡೆ'' ಎಂದು. ಹೊಡೆಯುವುದು ಎಂದರೆ ಈ ಆತ್ಮ-ಬ್ರಹ್ಮದ ಮೇಲೆಯೇ ಮನಸ್ಸನ್ನು ಏಕಾಗ್ರ ಮಾಡುವುದು; ಈ ಅಕ್ಷರದಲ್ಲಿಯೇ ಮನಸ್ಸನ್ನು ನಿಲ್ಲಿಸಿಕೊಳ್ಳುವುದು ಎಂದು. ಅದನ್ನು ಹೇಗೆ ಮಾಡುವುದು ಎಂದು ಗುರುವು ಹೀಗೆ ಹೇಳಿಕೊಡುತ್ತಾರೆ:

''ಮಗೂ, ಉಪನಿಷತ್ತಿನ ರೂಪದಲ್ಲಿರುವ ಶಾಸ್ತ್ರವೇ ಬತ್ತಳಿಕೆ. ಅದರಲ್ಲಿ ಉಪಾಸನೆಗೆ ಯೋಗ್ಯವಾದ ಹಲವಾರು ಮಂತ್ರಗಳಿವೆ. ಅವೇ ಬಾಣಗಳು. ಅವುಗಳಲ್ಲಿ ಹರಿತವಾದ, ಗುರುವಿನಿಂದ ಉಪದೇಶ ಮಾಡಲ್ಪಟ್ಟ ಬಾಣವನ್ನು ತೆಗೆದುಕೊಳ್ಳಬೇಕು. 'ಹರಿತವಾದ'



ಎಂದರೆ ಏನು ಗೊತ್ತೆ? ಸತತವಾಗಿ ಧ್ಯಾನಮಾಡುತ್ತ, ಚೆನ್ನಾಗಿ ಮಾಗಿದ ಎಂದರ್ಥ. ಅದನ್ನು ಬಿಲ್ಲಿಗೆ ಜೋಡಿಸಿಕೊಳ್ಳಬೇಕು. ಅಂದರೆ, ಇಂದ್ರಿಯಗಳೊಂದಿಗೆ ಮನಸ್ಸನ್ನು ಕೂಡ ಹೊರಗಿನ ವಸ್ತುಗಳಿಂದ ಹಿಂತೆಗೆದುಕೊಳ್ಳಬೇಕು ಎಂದರ್ಥ. ಅದಕ್ಕಾಗಿ ಇಂದ್ರಿಯಗಳು ಮತ್ತು ಮನಸ್ಸನ್ನು ಸಂಪೂರ್ಣವಾಗಿ ವಶದಲ್ಲಿ ಇಟ್ಟುಕೊಳ್ಳಬೇಕು. ಈ ಬಾಣವನ್ನು ಗುರಿಯತ್ತ ಹೊಡೆಯಬೇಕು. ಇಲ್ಲಿ ಗುರಿ ಎನ್ನುವುದು ಯಾವುದು ಗೊತ್ತೆ? ಬ್ರಹ್ಮ, ಆತ್ಮ ಅಥವಾ ಅಕ್ಷರವೇ ಆ ಗುರಿ. ಹೀಗೆ ಏಕಾಗ್ರಭಾವನೆಯಿಂದ ಬ್ರಹ್ಮ ಅಥವಾ ಅಕ್ಷರವೆಂಬ ಲಕ್ಷ್ಯವನ್ನು, ಹೇ ಮಗೂ ಚೆನ್ನಾಗಿ ಹೊಡೆ'' ಎಂದು ಗುರುವು ಆದೇಶಿಸುತ್ತಿದ್ದಾರೆ.

ನಂತರ, ಈ ಬಗೆಯ ಧ್ಯಾನಪ್ರಕ್ರಿಯೆಯ ಪರಿಕರಗಳನ್ನು ಇನ್ನೂ ಸ್ಪಷ್ಟವಾಗಿ ಗುರುವು ತಿಳಿಸಿಕೊಡುತ್ತಿದ್ದಾರೆ: ''ಮಗೂ, ಇಲ್ಲಿ ವೇದಮಂತ್ರಗಳಲ್ಲೆಲ್ಲ ಅತ್ಯುತ್ತಮವಾದ, ಶ್ರೇಷ್ಠವಾದ ಓಂಕಾರವೇ ಬಾಣಬಿಡುವ ಬಿಲ್ಲು. ಓಂಕಾರವು ಬ್ರಹ್ಮನ ಪ್ರತೀಕ; ಬ್ರಹ್ಮನ ಮೇಲೆ ಮನಸ್ಸನ್ನು ಏಕಾಗ್ರಗೊಳಿಸುವುದಕ್ಕೆ ಉತ್ತಮ ಸಾಧನ. ಹೀಗಾಗಿ ಇದನ್ನು ಬಾಣ ಬಿಡುವುದಕ್ಕೆ ಸಾಧನವಾದ ಬಿಲ್ಲಿಗೆ ಹೋಲಿಸಲಾಗಿದೆ. ಓಂಕಾರ ಜಪವನ್ನು ಅಥವಾ ಉಚ್ಚಾರಣೆಯನ್ನು ಚೆನ್ನಾಗಿ ಅಭ್ಯಾಸ ಮಾಡಿದರೆ, ಸಂಸ್ಕಾರವುಂಟಾಗುತ್ತದೆ. ಅದರಿಂದ ಉಂಟಾಗುವ ಏಕಾಗ್ರತೆಯಿಂದ ಬ್ರಹ್ಮನಲ್ಲಿ ತನ್ಮಯತೆಯನ್ನು ತಂದುಕೊಳ್ಳಲು ಸಾಧ್ಯವಾಗುತ್ತದೆ. ಇಲ್ಲಿ ಬಾಣ ಯಾವುದು? ಆತ್ಮವೇ ಬಾಣ. ಆತ್ಮ ಎಂದರೆ ಇಲ್ಲಿ ಜೀವಾತ್ಮ ಎಂದರ್ಥ. ನೀರಿನಲ್ಲಿ ಸೂರ್ಯನ ಪ್ರತಿಫಲನ ಇರುತ್ತದೆ. ಅದೇ ರೀತಿ ಜೀವನೂ ಕೂಡ ಬ್ರಹ್ಮ ಅಥವಾ ಪರಮಾತ್ಮನ ಪ್ರತಿಬಿಂಬ. ಅದನ್ನು ತಾನೇ ನಾವು ಬ್ರಹ್ಮನಲ್ಲಿ ಸೇರಿಸಿ ಐಕ್ಯತೆಯನ್ನು ಸಾಧಿಸಲು ಪ್ರಯತ್ನಿಸುತ್ತಿರುವುದು! ಹೀಗಾಗಿ ನಮ್ಮನ್ನೇ ನಾವು ಬಾಣವನ್ನಾಗಿ ಮಾಡಿಕೊಳ್ಳಬೇಕು. ನಮ್ಮನ್ನು ಓಂಕಾರದ ಉಪಾಸನೆಯಿಂದ ಪರಿಶುದ್ಧರನ್ನಾಗಿ ಮಾಡಿಕೊಳ್ಳಬೇಕು. ಪರಿಶುದ್ಧವಾದ ಮನಸ್ಸಿನಿಂದ ನಮ್ಮ ಲಕ್ಷ್ಯವಾದ ಬ್ರಹ್ಮನನ್ನು ಧ್ಯಾನಮಾಡಬೇಕು. ಹೇಗೆ ಬಾಣದಿಂದ ಗುರಿಯನ್ನು ಹೊಡೆದಾಗ, ಅದು ಗುರಿಯಲ್ಲಿಯೇ ಒಂದಾಗಿಬಿಡುತ್ತದೆಯೋ ಹಾಗೆಯೇ ನಮ್ಮ ವೈಯಕ್ತಿಕತೆಯೆಂಬ ಜೀವಭಾವವು ಕಳೆದು ಪರಮಾತ್ಮನಲ್ಲಿ ಅಭೇದ ಭಾವವನ್ನು ಪಡೆದುಕೊಳ್ಳಬೇಕು. ಇದನ್ನೇ ಬಾಣ-ಬಿಲ್ಲು-ಗುರಿಗಳ ರೂಪಕದಲ್ಲಿ ಗುರುವು ಉಪದೇಶಿಸುತ್ತಾರೆ.''

ಧ್ಯಾನ ಮಾಡುವುದಕ್ಕೆ ಬೇಕಾದ ತನ್ಮಯತೆಯ, ಏಕಾಗ್ರತೆಯ ಮನಃಸ್ಥಿತಿಯನ್ನು ಹೇಗೆ ಬೆಳೆಸಿಕೊಳ್ಳಬೇಕೆಂದು ಗುರುವು ಹೇಳಿಕೊಡುತ್ತಿದ್ದಾರೆ. ''ಈ ಅಕ್ಷರವೆಂಬ ಪುರುಷನಲ್ಲಿಯೇ ಸ್ವರ್ಗಲೋಕವೂ, ಭೂಮಿಯೂ ಮತ್ತು ಇವುಗಳ ಮಧ್ಯದಲ್ಲಿ ಇರುವ ಅಂತರಿಕ್ಷವೂ ಓತಪ್ರೋತವಾಗಿ ಹೆಣೆದುಕೊಂಡಿವೆ. ಹೀಗೆ ಎಲ್ಲದಕ್ಕೂ ಆಶ್ರಯವಾಗಿರುವ, ಆತ್ಮವನ್ನು ಮಾತ್ರವೇ ತಿಳಿದುಕೊಳ್ಳುವುದಕ್ಕೆ ಪ್ರಯತ್ನಪಡಿರಿ'' ಎಂದು ಗುರುವು ಸಂದೇಶ ನೀಡುತ್ತಿದ್ದಾರೆ. ಇದು ಎಲ್ಲ ಪ್ರಾಣಿಗಳ ಅಂತರಾತ್ಮನೇ ಆಗಿರುವುದರಿಂದ ಇಲ್ಲಿ ಬ್ರಹ್ಮನನ್ನೇ ಆತ್ಮನೆಂದು ಕರೆದಿದೆ. ಗುರುವು ಈ ಸಾಧನೆಯಲ್ಲಿ ಬರುವ ಅಡ್ಡಿಗಳನ್ನು ನಿವಾರಣೆ ಮಾಡಲು ಎಚ್ಚರಿಕೆಯನ್ನು ನೀಡುತ್ತಾರೆ : '' **'ಅನ್ಯಾ ವಾಚಾ ವಿಮುಂಚಥ, ಅಮೃತಸ್ಯ ಏಷ ಸೇತುಃ'** – *ಬೇರೆಯ ಮಾತುಗಳನ್ನು ಬಿಟ್ಟುಬಿಡಿರಿ. ಅಮೃತತ್ತ್ವವನ್ನು ಹೊಂದುವುದಕ್ಕೆ ಇದೇ ಸೇತುವಾಗಿದೆ.* ಸಂಸಾರವೆನ್ನುವುದು ಒಂದು ಮಹಾಸಾಗರವಿದ್ದಂತೆ. ಅದನ್ನು ದಾಟುವುದೇ ಮನುಷ್ಯ ಜನ್ಮದ ಏಕಮಾತ್ರಗುರಿಯಾಗಬೇಕು. ಇದಕ್ಕೆ ಸಾಧನವಾಗಿ ಈ ಆತ್ಮತತ್ತ್ವದ ಧ್ಯಾನವಿದೆ. ಹೀಗಾಗಿ ಬೇರೆ ಯಾವ ಮಾತುಗಳಲ್ಲಿ, ಕರ್ಮಗಳಲ್ಲಿ ತೊಡಗಿಸಿಕೊಳ್ಳದೆ, ಕೇವಲ ಆತ್ಮಧ್ಯಾನವನ್ನು ಮಾತ್ರವೇ ಮಾಡುತ್ತಿರಿ.''

ಈಗ ಗುರುವು ತಮ್ಮ ಶಿಷ್ಯರಿಗೆ ತನ್ನ ಶುಭಾಶಯಗಳನ್ನು ಈ ಮಾತುಗಳ ಮೂಲಕ ಸಲ್ಲಿಸುತ್ತಿದ್ದಾರೆ: ''ಗಾಡಿಯ ಚಕ್ರವನ್ನು ನೀನು ನೋಡಿಲ್ಲವೇನು? ಅದರ ಚಕ್ರಗಳೆಲ್ಲವೂ ಮಧ್ಯದಲ್ಲಿರುವ



ಗುಂಬವನ್ನೇ ಕೇಂದ್ರವಾಗಿಟ್ಟುಕೊಂಡು, ಅದರಲ್ಲಿಯೇ ಕೊನೆಗೊಳ್ಳುತ್ತದೆ, ಅಲ್ಲವೆ? ಅದರಂತೆಯೇ ನಮ್ಮ ದೇಹದಲ್ಲಿ ನಡೆಯುವ ಎಲ್ಲ ಕ್ರಿಯೆಗಳೆಲ್ಲವೂ ಬ್ರಹ್ಮನಲ್ಲಿಯೇ ಸಮರ್ಪಿತವಾಗಿರುತ್ತವೆ. ಈ ಬ್ರಹ್ಮನು ವಿವಿಧ ದೇಹಗಳಲ್ಲಿ ಹುಟ್ಟುತ್ತ ಅವುಗಳ ಒಳಗೆ ಸಂಚರಿಸುತ್ತಿದ್ದಾನೆ. **ಓಮ್** ಎಂದು ಅವನನ್ನು ಸರಿಯಾದ ವಿಧಾನದಲ್ಲಿ ಧ್ಯಾನಮಾಡಿರಿ. ನೀವು ಅಜ್ಞಾನದ ಕತ್ತಲನ್ನು ದಾಟಿ ಹೋಗಲು ಬಹಳ ಪ್ರಯತ್ನಮಾಡುತ್ತಿದ್ದೀರಿ. ನಿಮಗೆ ಒಳ್ಳೆಯದಾಗಲಿ, ಶುಭವಾಗಲಿ.''

ಪರಾವಿದ್ಯೆಯ ಸಹಾಯದಿಂದ ಸಂಸಾರವೆಂಬ ಕಡಲನ್ನು ದಾಟಿ, ಪರಮಾತ್ಮನನ್ನು ಪಡೆಯಬಹುದು. ಅವನು ಸರ್ವಜ್ಞನು; ಮಹಾನ್ ವಿಭೂತಿಯುಳ್ಳವನು. ಭೂಮಿ ಮತ್ತು ಅಂತರಿಕ್ಷಗಳು – ಈ ಎರಡೂ ಅವನ ಮಹಿಮೆಯಿಂದಲೇ ಅವುಗಳ ಸ್ಥಾನದಲ್ಲಿ ನಿಂತಿವೆ. ಇಂಥ ಆತ್ಮನು ಬ್ರಹ್ಮಪುರದಲ್ಲಿ ನೆಲೆಸಿದ್ದಾನೆ ಎಂದು ಗುರುವು ಉಪದೇಶಿಸುತ್ತಾರೆ. ''ಬ್ರಹ್ಮಪುರ ಎಂದರೆ ಏನು? ಚೈತನ್ಯದ ಬೆಳಕು ಇರುವ ಸ್ಥಳ ಎಂದು ಇದರ ಅರ್ಥ. ಬುದ್ಧಿಯಲ್ಲಿಯೇ ಜ್ಞಾನ ಅಥವಾ ಅರಿವಿನ ಭಾವನೆ ಉಂಟಾಗುವುದು. ಅಂಥ ಬುದ್ಧಿಗುಹೆಯಲ್ಲಿ, ಅರಿವಿನ ಪಟ್ಟಣದಲ್ಲಿ ಪರಮಾತ್ಮನು ಧ್ಯಾನಾಸಕ್ತನಿಗೆ ಲಭ್ಯನಾಗುತ್ತಾನೆ. ಈ ಬುದ್ಧಿಗುಹೆಯಲ್ಲಿ ಆಕಾಶವಿದೆ. ಅದನ್ನೇ ಸಾಧಾರಣ ಭಾಷೆಯಲ್ಲಿ, ಹೃತ್ಕಮಲದಲ್ಲಿರುವ ಆಕಾಶ ಎಂದು ಕರೆಯುತ್ತಾರೆ. ಅದರಲ್ಲಿ ಎಲ್ಲ ಕಡೆ ವ್ಯಾಪಿಸಿಕೊಂಡು ಆ ಪುರುಷನು ಇರುತ್ತಾನೆ. ಹೀಗಾಗಿ ಅವನನ್ನು ಅಲ್ಲಿ ಭಾವಿಸುವುದು ಅತ್ಯಂತ ಸುಲಭವಾದುದು.''

ಬುದ್ಧಿಯ ಗುಹೆಯಲ್ಲಿ ಇದ್ದರೂ, ಅವನ ಇರವನ್ನು ತರ್ಕದ ಮೂಲಕವೇ ಅನುಮಾನಿಸಬಹುದು ಎಂದು ಗುರುಗಳು ಈಗ ಹೇಳಿಕೊಡುತ್ತಾರೆ. ನಾವು ಮಾಡುವ ಆಲೋಚನೆಗಳೆಲ್ಲ ಮನಸ್ಸಿನಲ್ಲಿಯೇ ಉಂಟಾಗುತ್ತವೆ, ಅಲ್ಲವೇ. ಅವೆಲ್ಲ ಅರಿವನ್ನೇ ಪ್ರತಿಫಲಿಸುತ್ತವೆ. ಆ ಪರಿಶುದ್ಧ ಅರಿವೇ ಬ್ರಹ್ಮನು, ಆತ್ಮನು. ಇದೇ ರೀತಿ, ಆತ್ಮನು ಪ್ರಾಣದ ಕ್ರಿಯೆಯಲ್ಲಿಯೂ ವ್ಯಕ್ತನಾಗುತ್ತಾನೆ; ಇಂದ್ರಿಯಗಳ ಅರಿಯುವ ಕಾರ್ಯದಲ್ಲಿಯೂ ವ್ಯಕ್ತನಾಗುತ್ತಾನೆ. ಒಟ್ಟಾರೆ ಹೇಳಬೇಕೆಂದರೆ, ದೇಹದ ಎಲ್ಲ ಚೈತನ್ಯಾತ್ಮಕ ಕ್ರಿಯೆಗಳೂ ಅವನ ವಿವಿಧ ಅಭಿವ್ಯಕ್ತಿಗಳೇ ಆಗಿವೆ. ಅವನೇ ಸ್ಥೂಲಶರೀರದ ರೂಪದಲ್ಲಿಯೂ ಇದ್ದುಕೊಂಡು, ತಿನ್ನುವ ಅನ್ನದ ಪರಿಣಾಮವಾಗಿ, ಬೆಳೆಯುತ್ತಾನೆ; ಅನ್ನವು ಇಲ್ಲದಿದ್ದರೆ ಬಡವಾಗುತ್ತಾನೆ. ಈ ಆತ್ಮವನ್ನು ಶಾಸ್ತ್ರದಿಂದ, ಆಚಾರ್ಯರ ಉಪದೇಶದಿಂದ ತಿಳಿದುಕೊಳ್ಳಬಹುದು. ಹಾಗೆಯೇ ಆನಂದರೂಪನಾದ ಈ ಆತ್ಮವು ಶಮ, ದಮ, ಧ್ಯಾನ, ಸರ್ವಸಂಗತ್ಯಾಗ, ವೈರಾಗ್ಯ – ಮುಂತಾದವುಗಳ ಮೂಲಕ ಕಂಡುಬರುತ್ತಾನೆ. ಹೀಗೆ ಅವನನ್ನು ಕಂಡುಕೊಳ್ಳಲು ಅಹರ್ನಿಶಿ ಪ್ರಯತ್ನಿಸುವ ಮಹಾತ್ಮರು ಧೀರರು. ತಮ್ಮ ಆತ್ಮನಲ್ಲಿಯೇ ಬ್ರಹ್ಮವೆಂಬ ಈ ಪರಮಪುರುಷನು ಬೆಳಗುತ್ತಿರುವುದನ್ನು ಅವರು ಅರಿತುಕೊಳ್ಳುತ್ತಾರೆ.

### ಆತ್ಮದರ್ಶನದ ಫಲ

ಈ ದರ್ಶನದ ಫಲವೇನು? ಇದನ್ನು ರೋಮಾಂಚಕರವಾಗಿ ಗುರುಗಳು ವರ್ಣಿಸುತ್ತಾರೆ: ''ಸಗುಣಬ್ರಹ್ಮನಾಗಿ ಈ ವಿಶ್ವದ ಚರಾಚರದಲ್ಲಿ ವ್ಯಾಪ್ತನಾಗಿರುವ ಹಾಗೂ ಅದ್ವೈತ ತತ್ತ್ವವಾಗಿ ನಿರ್ಗುಣ ರೂಪನಾದ ಇವನನ್ನು ಕಂಡುಕೊಂಡರೆ ಹೃದಯದಲ್ಲಿನ ಅವಿದ್ಯಾಗ್ರಂಥಿಯು ಒಡೆದುಹೋಗುತ್ತದೆ. ಚಿತ್ ಮತ್ತು ಜಡಗಳು ಸೇರಿ, ಒಂದೇ ಎಂದು ಭಾಸವಾಗುವ ಅವಿದ್ಯೆಯ ಭಾವನೆಯನ್ನೇ ಇಲ್ಲಿ ಗ್ರಂಥಿ ಅಥವಾ ಗಂಟು ಎಂದು ಕರೆಯುತ್ತಾರೆ. ಮನಸ್ಸಿನಲ್ಲಿ ಉಂಟಾಗುವ ಅಂಥ ತಪ್ಪು ಭಾವನೆ ಸಂಪೂರ್ಣವಾಗಿ ನಾಶವಾಗುತ್ತದೆ. ಅವಿದ್ಯೆಯು ನಾಶವಾದಾಗ, ಆತ್ಮದ ಅಸ್ತಿತ್ವದ ಬಗೆಗಿನ, ಅವನ ಸ್ವರೂಪದ ಬಗೆಗಿನ ಎಲ್ಲ ಸಂಶಯಗಳೂ ಕಳೆದುಹೋಗುತ್ತವೆ. ಕರ್ಮಗಳು ಕಾಮಜನಿತವಾದುವು. ಕಾಮವು ಹುಟ್ಟುವುದು ಅವಿದ್ಯೆಯಿಂದಲೇ. ಅವಿದ್ಯೆಯು ನಾಶವಾದಾಗ, ಕರ್ಮಗಳಿಗೆ ಎಡೆಯಲ್ಲಿ? ಹೀಗಾಗಿ ಎಲ್ಲ ರೀತಿಯ ಕಾಮ್ಯಕರ್ಮಗಳೂ ನಿಂತುಹೋಗುತ್ತವೆ.''

ಜ್ಯೋತಿರ್ಮಯವಾದ ಬುದ್ಧಿಯ ಅರಿವು ಬೆಳಗುತ್ತಿರುವ ತಾಣದಲ್ಲಿ ಅವಿದ್ಯೆಯ ಸೋಂಕೂ ಇಲ್ಲದ ಆತ್ಮಜ್ಯೋತಿಯು, ಬುದ್ಧಿಯನ್ನು ಬೆಳಗುತ್ತ ವಿರಾಜಮಾನವಾಗಿ ಇರುವುದು. ಬುದ್ಧಿವೃತ್ತಿಗಳು, ಮನಸ್ಸಿನ ವೃತ್ತಿಗಳು, ಪ್ರಾಣ, ಇಂದ್ರಿಯಗಳೆಲ್ಲದರ ವೃತ್ತಿಗಳು ಚೈತನ್ಯಮಯವಾಗಿರುವುದಕ್ಕೆ ಈ ಆತ್ಮಜ್ಯೋತಿಯೇ ಕಾರಣ. ಹೀಗೆ ಇದು **ಜ್ಯೋತಿಷಾಂ ಜ್ಯೋತಿ** – *ಜ್ಯೋತಿಗಳಿಗೂ ಜ್ಯೋತಿಯಾಗಿದೆ* ಎಂದು ಗುರುಗಳು ಬಣ್ಣಿಸುತ್ತಾರೆ.

ಆತ್ಮವು ಜ್ಯೋತಿಗಳಿಗೂ ಜ್ಯೋತಿಯಾಗಿರುವುದು ಹೇಗೆ ಎಂದು ಅವರೇ ಈಗ ವಿವರಿಸುತ್ತಾರೆ: ''ಆತ್ಮನಲ್ಲಿ ಸೂರ್ಯನು ಬೆಳಗುವುದಿಲ್ಲ. ಅಂದರೆ ಎಲ್ಲವನ್ನೂ ಬೆಳಗುವ ಸೂರ್ಯನು ಬ್ರಹ್ಮನನ್ನು ಬೆಳಗಲು ಸಾಧ್ಯವಿಲ್ಲ. ಏಕೆಂದರೆ, ಆತ್ಮನ ಬೆಳಕಿನಿಂದಲೇ ಸೂರ್ಯನು ಬೆಳಗುತ್ತಾನೆ. ಇದೇ ರೀತಿ ಚಂದ್ರ ಮತ್ತು ನಕ್ಷತ್ರಗಳು ಕೂಡ.''

ನಾವು ಅನುಭವಿಸುವ ಎಲ್ಲವೂ ಬ್ರಹ್ಮವೇ. ಮುಂದೆ ಇರುವುದೂ ಬ್ರಹ್ಮವೇ; ಹಿಂದೆ ಇರುವುದು ಕೂಡ ಬ್ರಹ್ಮವೇ. ದಕ್ಷಿಣಕ್ಕೆ ಇರುವುದು ಬ್ರಹ್ಮವೇ; ಉತ್ತರಕ್ಕೆ ಇರುವುದು ಕೂಡ ಬ್ರಹ್ಮವೇ. ಕೆಳಗೂ ಮೇಲೂ ಹಬ್ಬಿರುವುದು ಬ್ರಹ್ಮವೇ. ಇವೆಲ್ಲವೂ ನಿಜವಾಗಿಯೂ ಶ್ರೇಷ್ಠವಾದ ಬ್ರಹ್ಮವೇ. ಜಗತ್ತಿನಲ್ಲಿ ಕಾಣುವುದೆಲ್ಲವೂ ಹಗ್ಗದ ಮೇಲೆ ಕಾಣುವಂಥ ಹಾವಿನಂತೆ ಅಸತ್ಯವೇ ಆಗಿದೆ. ಬ್ರಹ್ಮವೊಂದೇ ನಿಜವಾಗಿಯೂ ಸತ್ಯವಾಗಿರುವುದು.

### ಸಹಕಾರಿ ಸಾಧನಗಳು

ಪರಾವಿದ್ಯೆಯನ್ನು ತಿಳಿದುಕೊಳ್ಳುವುದಕ್ಕಾಗಿ ಬೇಕಾದ ಧ್ಯಾನದ ವಿಧಾನವನ್ನು ಗುರುಗಳು ವಿಸ್ತಾರವಾಗಿ ಹೇಳಿದರು. ಈಗ ಧ್ಯಾನಾಭ್ಯಾಸವನ್ನು ಕೈಗೊಳ್ಳುವುದಕ್ಕೆ ಅವಶ್ಯಕವಾದ ನೈತಿಕ

ಮತ್ತು ಶುದ್ಧೀಕರಣ ಸಾಧನಗಳನ್ನು ಅವರು ಉಪದೇಶ ಮಾಡುತ್ತಿದ್ದಾರೆ. ಅದಕ್ಕೂ ಮುಂಚೆ, ಪರಮಾರ್ಥ ವಸ್ತುವಾದ ಆತ್ಮನು ಯಾರು ಎಂದು ಗೊತ್ತುಮಾಡುವುದಕ್ಕೆ ಒಂದು ಸುಂದರವಾದ ರೂಪಕವನ್ನು ನೀಡುತ್ತಿದ್ದಾರೆ: ''ಮಗೂ, ಸುಂದರವಾಗಿರುವ ರೆಕ್ಕೆಗಳುಳ್ಳ ಎರಡು ಪಕ್ಷಿಗಳು, ಒಂದೇ ಮರದ ಮೇಲೆ ಇವೆ ಎಂದು ಭಾವಿಸಿಕೋ. ಒಂದು ಹಕ್ಕಿಯು ಸವಿಯಾದ ಹಣ್ಣನ್ನು ತಿನ್ನುತ್ತಿದೆ. ಇನ್ನೊಂದು ಸುಮ್ಮನೆ ನೋಡುತ್ತಿದೆ. ವೃಕ್ಷವೆಂದರೆ ಸಂಸಾರವೃಕ್ಷ. ಇಲ್ಲಿ ಜೀವಿಯೆಂಬ ಒಂದು ಪಕ್ಷಿ ಕರ್ಮಫಲಗಳನ್ನು ಅನುಭವಿಸುತ್ತಿದೆ. ಇನ್ನೊಂದು ಪಕ್ಷಿಯು ನಿತ್ಯಶುದ್ಧಬುದ್ಧ ಮುಕ್ತವಾದ ಬ್ರಹ್ಮನ ಸಂಕೇತ. ಅದು ಬರೀ ಸಾಕ್ಷಿರೂಪವಾಗಿದೆ; ಸುಮ್ಮನೆ ನೋಡುತ್ತಿದೆ. ಜೀವಿಯು ತನ್ನ ಶರೀರದಲ್ಲಿ ಇದ್ದುಕೊಂಡು, ತಾನು ಸುಖಿ, ದುಃಖಿ ಎಂದುಕೊಂಡು, ಸಂಸಾರದಲ್ಲಿ ಮಗ್ನನಾಗಿದ್ದಾನೆ. ಅವನು ತನಗಿಂತ ಭಿನ್ನವೆಂದು ಅನ್ನಿಸುವ



ಪರಮಾತ್ಮನಿಗಿಂತ ತಾನು ಯಾವ ರೀತಿಯಲ್ಲಿಯೂ ಭಿನ್ನನಲ್ಲ ಎಂದು ತಿಳಿದುಕೊಳ್ಳುತ್ತಾನೆಯೋ, ಅಂದರೆ ಈಶ್ವರನ ಮಹಿಮೆಯನ್ನು ಅರಿತುಕೊಳ್ಳುತ್ತಾನೆಯೋ ಆಗ ಶೋಕಗಳನ್ನೆಲ್ಲ ಬಿಟ್ಟುಬಿಡುತ್ತಾನೆ. 'ನಾನೇ ಪ್ರತಿಯೊಬ್ಬ ಜೀವಿಗೂ ಆತ್ಮನಾಗಿದ್ದೇನೆ. ಸಮನಾಗಿ ಎಲ್ಲ ಪ್ರಾಣಿಗಳಲ್ಲಿಯೂ ನಾನು ಇದ್ದೇನೆ. ಅವಿದ್ಯೆಯಿಂದ ಉಂಟಾದ ಉಪಾಧಿಗಳ ಅಳತೆಗೆ ನಾನು ಒಳಪಟ್ಟಿಲ್ಲ. ನನಗಿಂತ ಇನ್ನೊಬ್ಬ ಆತ್ಮನಿಲ್ಲ' ಎಂಬ ಸಾಕ್ಷಾತ್ಕಾರವನ್ನು ಅವನು ಪಡೆದುಕೊಳ್ಳುತ್ತಾನೆ. ಮಗೂ, ಈಗ ತಿಳಿಯಿತೇ ಹಿಂದೆ ಹೇಳಿದ ರೂಪಕದಲ್ಲಿರುವ ಎರಡು ಹಕ್ಕಿಗಳು ಬೇರೆ ಬೇರೆಯಲ್ಲ, ಒಂದೇ ಎಂದು.

''ಇಂಥ ಚೈತನ್ಯರೂಪನಾದ, ಎಲ್ಲಕ್ಕೂ ಕಾರಣನಾದ ಪುರುಷನನ್ನು ಯಾರು ತಿಳಿದುಕೊಳ್ಳುತ್ತಾರೆಯೋ, ಅವರು ಎಲ್ಲ ಪುಣ್ಯ ಪಾಪಗಳನ್ನೂ ಕೊಡವಿಹಾಕುತ್ತಾರೆ; ಯಾವ ಪಾಪದ ಲೇಪವೂ ಇಲ್ಲದೆ ಪರಮಾತ್ಮನಲ್ಲಿ ಸಾಮ್ಯತೆಯನ್ನು ಪಡೆದುಕೊಳ್ಳುತ್ತಾರೆ. ಆಗ ಈ ಪರಮಾತ್ಮನೇ ಸರ್ವಭೂತಗಳಾಗಿ ಅವನಿಗೆ ಕಂಡುಬರುವನು. ಅಂಥ ಸಿದ್ಧನು ಬರಿಯ ಬರಡು ಪಂಡಿತನಾಗಿರುವುದಿಲ್ಲ. ಅವನು ಆತ್ಮನಲ್ಲಿಯೇ ಆನಂದವನ್ನು ಪಡೆದುಕೊಳ್ಳುತ್ತಾನೆ; ಆತ್ಮನಲ್ಲಿಯೇ ಸಂತೃಪ್ತಭಾವವನ್ನು ಹೊಂದುತ್ತಾನೆ. ಅಂಥವನು ಬ್ರಹ್ಮವನ್ನು ತಿಳಿದಿರುವವರಲ್ಲೆಲ್ಲಾ ಉತ್ತಮನು.

''ಮಗೂ, ಇಂಥ ಬ್ರಹ್ಮನಲ್ಲಿ ಮನಸ್ಸನ್ನು ಏಕಾಗ್ರಮಾಡುವ ಯೋಗ್ಯತೆಯನ್ನು ಪಡೆದುಕೊಳ್ಳಬೇಕಾದರೆ, ಸತ್ಯನಿಷ್ಠನಾಗಿರಬೇಕು. ಹಾಗೆಯೇ ತಪಸ್ಸನ್ನು ಆಚರಿಸಬೇಕು; ಸರಿಯಾದ ಜ್ಞಾನದಿಂದ ಕೂಡಿರಬೇಕು. ಮತ್ತು ಅದನ್ನು ಸಂಪಾದಿಸಲು, ಕಠಿಣವಾದ ಬ್ರಹ್ಮಚರ್ಯವನ್ನು ಪರಿಪಾಲನೆ ಮಾಡಲೇಬೇಕು. ಇಂಥ ಸಹಕಾರಿ ಸಾಧನೆಗಳಿಂದ ಒಬ್ಬ ವ್ಯಕ್ತಿಯು ತನ್ನ ವ್ಯಕ್ತಿತ್ವದಲ್ಲಿರುವ ದೋಷಗಳನ್ನೆಲ್ಲ ಕಳೆದುಕೊಳ್ಳುತ್ತಾನೆ. ನಿಜವಾದ ಅರ್ಥದಲ್ಲಿ ಅವನು ಸಂನ್ಯಾಸಿಯಾಗುತ್ತಾನೆ. ಅವನು ಶುಭ್ರ ಚಾರಿತ್ರ್ಯದಿಂದ ಕಂಗೊಳಿಸುತ್ತಾನೆ.

''ಮಗೂ, ಕಡೆಯಲ್ಲಿ ಸತ್ಯವೇ ಜಯಿಸುವುದು; ಸುಳ್ಳಲ್ಲ. ಎಲ್ಲ ಕಾಮನೆಗಳನ್ನೂ ಆತ್ಮನಲ್ಲಿಯೇ ಕಂಡುಕೊಂಡ ಆಪ್ತಕಾಮರಾದ ಋಷಿಗಳು ಸತ್ಯವೆಂಬ ಬೆಳಕಿನಿಂದ ಬೆಳಗುತ್ತಿರುವ ಮಾರ್ಗದಲ್ಲಿಯೇ ಸಾಗಿಹೋಗುತ್ತಾರೆ; ಪರಮಸತ್ಯನಾದ ಪರಮಾತ್ಮನನ್ನು ಪಡೆದುಕೊಳ್ಳುತ್ತಾರೆ.

''ಶೌನಕ, ಈ ಆತ್ಮವನ್ನು ಕಣ್ಣಿನಿಂದ ನೋಡಲಾಗುವುದಿಲ್ಲ; ಮಾತುಗಳಿಂದ ಗ್ರಹಿಸಲು ಕೂಡ ಸಾಧ್ಯವಾಗುವುದಿಲ್ಲ, ಕರ್ಮಗಳಿಂದ ಆತ್ಮವು ಸಿಕ್ಕುವುದಿಲ್ಲ; ಕೇವಲ ತಪಸ್ಸಿನಿಂದ ಬ್ರಹ್ಮದರ್ಶನವು ದೊರಕುವುದಿಲ್ಲ. ಯಾರ ಮನಸ್ಸು ವಿಶುದ್ಧಜ್ಞಾನದಿಂದ ಕೂಡಿ, ಸ್ವಚ್ಛಜಲದಂತೆ ಪರಿಶುಭ್ರವಾಗಿರುವುದೊ, ಅವನು ಧ್ಯಾನಮಾಡಿ, ಆತ್ಮದರ್ಶನವನ್ನು ಮಾಡಿಕೊಳ್ಳುತ್ತಾನೆ. ಇದಕ್ಕೆ ಕಾರಣ, ಈ ಆತ್ಮನು ಅತ್ಯಂತ ಸೂಕ್ಷ್ಮನಾದವನು. ಯಾವ ಶರೀರದಲ್ಲಿ ಪ್ರಾಣವು ಐದು ವಿಧವಾಗಿ ಪ್ರವೇಶಮಾಡಿದೆಯೋ, ಅದೇ ಶರೀರದಲ್ಲಿಯೇ ಪರಿಶುದ್ಧವಾದ ಮನಸ್ಸಿನ ಮೂಲಕ ಅವನು ತಿಳಿದುಬರುತ್ತಾನೆ. ಈ ಪರಮಾತ್ಮನು ಕಟ್ಟಿಗೆಯಲ್ಲಿರುವ ಬೆಂಕಿಯಂತೆ, ಹಾಲಿನಲ್ಲಿರುವ ಜಿಡ್ಡಿನಂತೆ ಎಲ್ಲೆಡೆ ವ್ಯಾಪ್ತನಾಗಿರುತ್ತಾನೆ. ಇದೇ ರೀತಿ ಜನರ ಅಂತಃಕರಣವು ಕೂಡ ಚೈತನ್ಯದಿಂದ ನಳನಳಿಸುತ್ತಿದೆ. ಇಂಥ ಮನಸ್ಸು ಸಾಧನೆಯಿಂದ ಪರಿಶುದ್ಧವಾದರೆ ಮಾತ್ರ, ತನ್ನ ಅಂತರಂಗದಲ್ಲಿ ಓತಪ್ರೋತವಾದ ಚೈತನ್ಯಸ್ವರೂಪನಾದ ಪರಮಾತ್ಮನನ್ನು ಕಂಡುಕೊಳ್ಳುತ್ತದೆ.''

### ಆತ್ಮಜ್ಞಾನದ ಪ್ರಶಂಸೆ

''ಮಗೂ, ಶೌನಕ. ಶುದ್ಧ ಮನಸ್ಸುಳ್ಳವನು ಯಾವ ಲೋಕವನ್ನು ಬೇಕಾದರೂ ಮನಸ್ಸಿನಲ್ಲಿ ಭಾವಿಸಿಕೊಳ್ಳಬಹುದು. ಅದರಲ್ಲಿನ ಕಾಮಗಳನ್ನು ಅನುಭವಿಸಿಕೊಳ್ಳಬಹುದು, ಅವುಗಳೆಲ್ಲವನ್ನೂ, ಅಷ್ಟು ಮಾತ್ರವಲ್ಲ, ಅದಕ್ಕಿಂತಲೂ ಎಷ್ಟೋ ಅತಿಶಯವಾದ ಆನಂದವನ್ನು ಆತ್ಮಜ್ಞನಾದವನು ಗೆದ್ದುಕೊಳ್ಳುತ್ತಾನೆ. ತನಗೆ ಒಳ್ಳೆಯದಾಗಬೇಕು ಎಂಬ ಬಯಸುವ ಪ್ರತಿಯೊಬ್ಬನೂ ಅಂಥ ಮಹಾತ್ಮನನ್ನು ಸೇವೆಮಾಡಬೇಕು; ನಮಸ್ಕರಿಸಬೇಕು; ಅರ್ಚಿಸ

ಬೇಕು. ಬ್ರಹ್ಮವೆಂಬ ಅತ್ಯುನ್ನತ ಸ್ಥಾನವನ್ನು ಪಡೆದುಕೊಂಡ ಮಹಾತ್ಮನು ಸಂಸಾರವನ್ನು ಮೀರಿಹೋಗುತ್ತಾನೆ. ಜನ್ಮಮರಣ ಚಕ್ರದಿಂದ ಪಾರಾಗುತ್ತಾನೆ. ಮುಕ್ತನಾದ ಅವನಿಗೆ ಮತ್ತೆ ಪುನರ್ಜನ್ಮ ಉಂಟಾಗುವುದಿಲ್ಲ.

''ಈ ಮೋಕ್ಷವನ್ನು ಪಡೆದುಕೊಳ್ಳಬೇಕು ಎಂದು ಇಚ್ಛಿಸುವವನು ಎಲ್ಲ ಕಾಮನೆಗಳನ್ನೂ ತ್ಯಾಗಮಾಡಬೇಕು. ಕಾಮತ್ಯಾಗವೇ ಮೋಕ್ಷಮಾರ್ಗಕ್ಕೆ ಪ್ರಧಾನವಾದ ಸಾಧನವಾಗಿದೆ. ಯಾರು ಯಾವ ಕಾಮನೆಗಳನ್ನು ಬಯಸುತ್ತಾರೆಯೋ, ಅವುಗಳನ್ನು ಪಡೆದುಕೊಳ್ಳಲು, ಆ ಆಸೆಗಳನ್ನು ಹೊತ್ತು, ಮತ್ತೆ ಮತ್ತೆ ಹುಟ್ಟಿಬರುತ್ತಾರೆ. ಎಲ್ಲ ಕಾಮನೆಗಳನ್ನೂ ಗೆದ್ದುಕೊಂಡ ಕೃತಕೃತ್ಯನಲ್ಲಿ ಮಾತ್ರವೇ ಈ ಎಲ್ಲ ಕಾಮಗಳೂ ಅಡಗಿಹೋಗುವವು. ಏಕೆಂದರೆ ಕಾಮಗಳು ಉತ್ಪನ್ನವಾಗುವುದಕ್ಕೆ ಬೇಕಾದ ಅಜ್ಞಾನವು ಅವನಲ್ಲಿ ಸಂಪೂರ್ಣವಾಗಿ ಕಳೆದುಹೋಗಿರುತ್ತದೆ.

''ಇಂಥ ಆತ್ಮವು ಬಹಳ ಬುದ್ಧಿಮತ್ತೆಯಿಂದ ಲಭಿಸುವುದೆಂದು ಕೆಲವರು ತಪ್ಪಾಗಿ ಭಾವಿಸಿಕೊಳ್ಳುತ್ತಾರೆ, ಅದು ಸಾಧ್ಯವೇ ಇಲ್ಲ. ಹಾಗೆಯೇ ಚೆನ್ನಾಗಿ ಪ್ರವಚನ ಮಾಡುವ ಶಕ್ತಿಯಿಂದಲೂ, ಬಹಳ ಗ್ರಂಥಗಳ ಅಧ್ಯಯನದಿಂದ ಕೂಡ ಆತ್ಮನನ್ನು ತಿಳಿದುಕೊಳ್ಳಲು ಸಾಧ್ಯವಿಲ್ಲ. ಯಾರಿಗೆ ಪರಮಾತ್ಮನಲ್ಲದೆ ಬೇರೆ ಏನೂ ಬೇಕಾಗಿಲ್ಲವೋ, ಅವನಿಗೆ ಪರಮಾತ್ಮನೇ ತನ್ನನ್ನು ತಾನು ತೋರಿಕೊಳ್ಳುವನು. ಅವನಿಗೆ ತನ್ನ ಸ್ವರೂಪದ ರಹಸ್ಯವನ್ನು ಅನಾವರಣ ಮಾಡುವನು. ಕತ್ತಲೆಯಲ್ಲಿ ಕಾಣಿಸಿಕೊಳ್ಳದ ಮಡಕೆಯು, ಬೆಳಕು ಬಂದಾಗ ತಾನೇ ತಾನಾಗಿ ತೋರಿಸಿಕೊಳ್ಳುವುದಿಲ್ಲವೆ? ಹಾಗೆ ಜ್ಞಾನವೆಂಬ ಬೆಳಕಿನಿಂದ ಕೂಡಿರುವವನಿಗೆ ಆತ್ಮವು ತಾನೇತಾನಾಗಿ ತೋರಿಬರುವುದು.

''ಹೀಗೆ ಆತ್ಮವನ್ನು ಪಡೆದುಕೊಳ್ಳಬಯಸುವವನು ಆತ್ಮನಿಷ್ಠೆಯಿಂದ ಹುಟ್ಟುವ ಆತ್ಮಶಕ್ತಿಯಿಂದ ಕೂಡಿರಬೇಕು. ಅಂಥ ಬಲವಿಲ್ಲದವನು ಆತ್ಮವನ್ನು ಪಡೆದುಕೊಳ್ಳಲಾರನು. ಹಾಗೆಯೇ ಲೌಕಿಕ ವಿಷಯಗಳಲ್ಲಿ ಪ್ರಮಾದಗಳನ್ನು ಮಾಡುವವನಿಗೂ ಆತ್ಮವು ದೊರಕುವುದಿಲ್ಲ. ಎಲ್ಲಕ್ಕಿಂತ ಮುಖ್ಯವಾಗಿ ಸಾಧಕನು ನಿಜವಾದ ಅರ್ಥದಲ್ಲಿ ಕಾಮಗಳನ್ನು ತ್ಯಾಗಮಾಡಿದ ಸಂನ್ಯಾಸಿಯಾಗಿರಬೇಕು. ಇಲ್ಲದೇ ಇದ್ದರೆ ಆತ್ಮಸಾಕ್ಷಾತ್ಕಾರವು ಸಾಧ್ಯವೇ ಇಲ್ಲ. ಹೀಗೆ ಆತ್ಮನಿಷ್ಠೆಯ ಬಲ, ಪ್ರಮಾದಗಳಿಲ್ಲದಿರುವುದು ಮತ್ತು ನಿಜವಾದ ಸಂನ್ಯಾಸ — ಈ ವಿಧಾನಗಳನ್ನು ಅನುಸರಿಸಿ ಬಹಳವಾಗಿ ಶ್ರಮವಹಿಸಿ ಪ್ರಯತ್ನಮಾಡುವಂಥ ಜ್ಞಾನಿಯು ಮಾತ್ರ ಬ್ರಹ್ಮಧಾಮವನ್ನು ಪ್ರವೇಶಮಾಡುವನು.''

### ಮುಕ್ತಿಯ ವಿಧಾನ

ಮೋಕ್ಷಸ್ಥಿತಿಯು ಹೇಗೆ ಇರುತ್ತದೆ? ಆತ್ಮಜ್ಞಾನವನ್ನು ಪಡೆದುಕೊಂಡ ಋಷಿಗಳು ಸಂತೃಪ್ತರಾಗಿರುತ್ತಾರೆ; ಕೃತಾತ್ಮರಾಗಿರುತ್ತಾರೆ. ಎಲ್ಲ ರೀತಿಯ ರಾಗದ್ವೇಷಗಳೂ ಅವರಲ್ಲಿ ನಶಿಸಿಹೋಗಿರುತ್ತವೆ. ಹೀಗಾಗಿ ಪ್ರಶಾಂತವಾದ ಮನಸ್ಸನ್ನು ಹೊಂದಿರುತ್ತಾರೆ. ಸರ್ವಗತನಾದ ಆತ್ಮನನ್ನು ಅವರು ಎಲ್ಲೆಲ್ಲಿಯೂ ಪಡೆದುಕೊಳ್ಳುತ್ತಾರೆ. ಇಂದ್ರಿಯಗಳು ಮತ್ತು ಮನಸ್ಸನ್ನು ಸಂಪೂರ್ಣವಾಗಿ ಹತೋಟಿಗೆ ತಂದುಕೊಂಡಿರುವ ಅವರು, ಆತ್ಮರೂಪಿಗಳಾಗಿ ಎಲ್ಲವನ್ನು ಪ್ರವೇಶಿಸುತ್ತಾರೆ; ಅಂದರೆ ಎಲ್ಲವೂ ಆಗಿಬಿಡುತ್ತಾರೆ. ಇವರೇ ನಿಜವಾದ ಅರ್ಥದಲ್ಲಿ ಸಂನ್ಯಾಸಿಗಳು. ವೇದಾಂತ ಅಥವಾ ಉಪನಿಷತ್ತುಗಳು ಬೋಧಿಸುವ ಆತ್ಮಬ್ರಹ್ಮೈಕ್ಯ ವಿಜ್ಞಾನದ ತಿರುಳನ್ನು ನಿಶ್ಚಯವಾಗಿ ಅನುಭವಕ್ಕೆ ತಂದುಕೊಂಡವರು. ತಮ್ಮ ಈ ಪರಮ ಸಂನ್ಯಾಸ ಯೋಗದಿಂದ ಅವರು ಬ್ರಹ್ಮಭೂತರಾಗಿ ಮರಣವನ್ನು ಮೆಟ್ಟಿ, ಅಮೃತಸ್ವರೂಪರಾಗುತ್ತಾರೆ. ಎಲ್ಲ ದ್ವೈತಭಾವನೆಗಳಿಂದ ಮುಕ್ತವಾದ ಬಿಡುಗಡೆಯನ್ನು ಹೊಂದುತ್ತಾರೆ. ಆ ಮುಕ್ತಸ್ಥಿತಿಯಲ್ಲಿ ದೇಹವು ನಿರ್ಮಾಣವಾಗುವುದಕ್ಕೆ ಬೇಕಾದ ಪ್ರಾಣ ಮುಂತಾದ ಎಲ್ಲ ಕಲೆಗಳೂ ಅವುಗಳ ಮೂಲಕಾರಣವನ್ನು ಸೇರಿಕೊಳ್ಳುತ್ತವೆ; ಇಂದ್ರಿಯಗಳೆಲ್ಲವೂ ತಮ್ಮ ತಮ್ಮ ಅಭಿಮಾನಿ ದೇವತೆಗಳಲ್ಲಿ ಹೋಗಿ ಸೇರಿಕೊಳ್ಳುತ್ತವೆ; ಈ ಮಹಾತ್ಮನ ಕರ್ಮಗಳೆಲ್ಲವೂ ನಾಶವಾಗುತ್ತವೆ. ಪ್ರಾರಬ್ಧಕರ್ಮವು ಮಾತ್ರ ದೇಹರೂಪದಲ್ಲಿ ಉಳಿದುಕೊಂಡು, ದೇಹತ್ಯಾಗದ ನಂತರ ಅದೂ ನಶಿಸಿಹೋಗುತ್ತದೆ. ಮನಸ್ಸು-ಬುದ್ಧಿಗಳು ಆತ್ಮನ ಪ್ರತಿಫಲನಗಳೇ ಆಗಿದ್ದು, ಅವೆಲ್ಲವೂ ತಮ್ಮ ಮೂಲರೂಪವಾದ ಆತ್ಮನಲ್ಲಿಯೇ ವಿಲೀನವಾಗುತ್ತವೆ. ಹೀಗೆ ದೇಹವೇ ಮುಂತಾದ ಎಲ್ಲ ಉಪಾಧಿಗಳು ನಶಿಸಿಹೋಗಲು, ಹುಟ್ಟಿಲ್ಲದ, ಮುಪ್ಪಿಲ್ಲದ, ಅವಿನಾಶಿಯಾದ, ನಿರ್ಭಯವಾದ, ಹಿಂದು-ಮುಂದು-ಒಳಗು-ಹೊರಗು ಯಾವುದೂ ಇಲ್ಲದ, ತನಗೆ ಎರಡನೆಯದು ಎನ್ನುವುದು ಇಲ್ಲದ ಅನಂತ ಆಕಾಶದಂತಿರುವ ಪರಬ್ರಹ್ಮನಲ್ಲಿ ಒಂದಾಗಿಬಿಡುತ್ತಾನೆ. ಹಲವಾರು ನೀರಿನ ಗಡಿಗೆಗಳಲ್ಲಿ ಮೂಡಿದ ಸೂರ್ಯನ ಪ್ರತಿಬಿಂಬಗಳು, ಆ ಗಡಿಗೆಗಳು ನಾಶವಾದಾಗ, ಮೂಲ ಸೂರ್ಯರೂಪದಲ್ಲಿ ವಿಲೀನವಾಗುವಂತೆ ದೇಹಾದಿಗಳ ಉಪಾಧಿಗಳೆಲ್ಲವೂ ನಾಶವಾಗಿ, ಎಲ್ಲವೂ ಒಂದೇ ಸ್ವರೂಪವನ್ನು ಪಡೆದುಕೊಳ್ಳುತ್ತವೆ. ವಿವಿಧ ಕಡೆಗಳಿಂದ ಹರಿದುಬರುವ ನದಿಗಳು ಹೇಗೆ ತಮ್ಮ ಹೆಸರುಗಳು, ರೂಪಗಳನ್ನು ತ್ಯಜಿಸಿ ಸಮುದ್ರದಲ್ಲಿ ಒಂದಾಗಿ ಬಿಡುತ್ತವೆಯೋ, ಹಾಗೆಯೇ ಜ್ಞಾನಿಗಳು ತಮ್ಮ ನಾಮ ರೂಪಗಳ ವೈವಿಧ್ಯವನ್ನೆಲ್ಲ ತ್ಯಜಿಸಿ, ಪರಾತ್ಪರನಾದ ದಿವ್ಯಪುರುಷನಾದ ಪರಮಾತ್ಮನಲ್ಲಿ ಒಂದಾಗಿಬಿಡುವರು.

ಹೀಗೆ ಅಂಗಿರಸ ಗುರುಗಳು ಶೌನಕನಿಗೆ ಉಪದೇಶ ಮಾಡಿ, ಪರಮಧ್ಯೇಯದ ಮಾರ್ಗವನ್ನು ತೋರಿಸಿಕೊಟ್ಟರು. ಇದನ್ನು ಶ್ರದ್ಧೆಯಿಂದ, ಸತ್ಯ ಮುಂತಾದ ವ್ರತಗಳನ್ನು ಅನುಷ್ಠಾನ ಮಾಡುತ್ತ, ಅಧ್ಯಯನ ಮಾಡಬೇಕು, ಇಲ್ಲದಿದ್ದರೆ, ಇದರ ಫಲ ಸಿಗುವುದಿಲ್ಲ ಎಂದು ಉಪನಿಷತ್ತು ಅಂತಿಮವಾಗಿ ನಮಗೆ ಎಚ್ಚರಿಕೆಯನ್ನು ನೀಡುತ್ತದೆ. ಉಪನಿಷತ್ತಿನಲ್ಲಿ ಹೇಳಿರುವ ಈ ಸತ್ಯವನ್ನು ತಮ್ಮ ಜೀವನದಲ್ಲಿ ಸಾಕ್ಷಾತ್ಕರಿಸಿಕೊಂಡಿರುವ ಎಲ್ಲ ಶ್ರೇಷ್ಠ ಋಷಿಗಳಿಗೂ ನಮಸ್ಕಾರಗಳು! ಮತ್ತೆ ಮತ್ತೆ ನಮಸ್ಕಾರಗಳು. ❋



# ಕಲಿಯುಗದ ಯಶೋದೆ



ಕಥೆ : ಕೆ. ಅಳಗರಾಜ

ಚಿತ್ರ : ಮಣಿಸೆಲ್ವನ್

1 ಅಘೋರಮಣೀದೇವಿಯು ಗೋಪಾಲ ಕೃಷ್ಣನ ಪರಮಭಕ್ತೆ. ಕಲ್ಕತ್ತೆಯಲ್ಲಿ ಗಂಗಾನದಿಯ ತೀರದಲ್ಲಿರುವ ಕಾಮಾರಹಾಟಿಯಲ್ಲಿ ಅವಳು ವಾಸವಾಗಿದ್ದಳು. ಅವಳಿಗೆ ಆಗಾಗ ಬಾಲಗೋಪಾಲನ ದರ್ಶನವಾಗುತ್ತಿತ್ತು. ಅವಳ ಪಾಲಿಗೆ ಬಾಲಗೋಪಾಲನು ಜೀವಂತ ಮಗುವಾಗಿದ್ದ.



2 ಒಂದು ದಿನ ಅವಳು ಬಾಲಗೋಪಾಲನಿಗೆ ತಿನ್ನಿಸಿ, ಅವನನ್ನು ನಿದ್ದೆ ಮಾಡಿಸಲು ಜೋಗುಳ ಹಾಡಿದಳು. ಗೋಪಾಲನೊಂದಿಗೆ ಅವಳೂ ನೆಲದ ಮೇಲೆ ಮಲಗಿದಳು. ಇಬ್ಬರೂ ನಿದ್ರಿಸಿದರು. ಇದ್ದಕ್ಕಿದ್ದಂತೆ ಗೋಪಾಲ ಹಠ ಹಿಡಿದ . . . .




3 ಗೋಪಾಲನಿಗೆ ಸ್ನಾನ ಮಾಡಿಸುವುದು, ತಿನ್ನಿಸುವುದು, ಆಟವಾಡಿಸುವುದು ಹಾಗೂ ಅವನನ್ನು ಸಂತಸದಿಂದ ಇರಿಸುವುದು ಇವನ್ನೆಲ್ಲ ಮಾಡುತ್ತ ಆಕೆ ಅವನ ಸೇವೆ ಮಾಡುತ್ತಿದ್ದಳು. ತಾಯಿ ತನ್ನ ಮಗುವನ್ನು ಆರೈಕೆ ಮಾಡುವಂತೆ ಗೋಪಾಲನನ್ನು ಆಕೆ ಆರೈಕೆ ಮಾಡುತ್ತಿದ್ದಳು. ಆದ್ದರಿಂದ ಉಳಿದವರೆಲ್ಲ ಅವಳನ್ನು 'ಗೋಪಾಲೇರ್ ಮಾ'(ಅಂದರೆ 'ಗೋಪಾಲನ ತಾಯಿ' – ಬಂಗಾಳಿಯಲ್ಲಿ) ಎಂದೇ ಕರೆಯುತ್ತಿದ್ದರು.

4 ಹಲವಾರು ವರ್ಷಗಳು ಉರುಳಿದವು. ಒಂದು ಸಲ ಅಘೋರಮಣಿ ಇನ್ನೊಬ್ಬ ಮಹಿಳೆಯೊಂದಿಗೆ ದಕ್ಷಿಣೇಶ್ವರಕ್ಕೆ ಭೇಟಿ ಕೊಟ್ಟಳು. ಅಲ್ಲಿ ವಾಸವಾಗಿದ್ದ ಶ್ರೀರಾಮಕೃಷ್ಣರನ್ನು ಅವರು ಭೇಟಿಯಾದರು.












ಅವಳ ಆಹ್ವಾನದ ಮೇರೆಗೆ ಶ್ರೀರಾಮಕೃಷ್ಣರು ಕಾಮಾರಹಾಟಿಯ ರಾಧಾಕೃಷ್ಣ ಮಂದಿರಕ್ಕೆ ಭೇಟಿಕೊಟ್ಟರು.
ಅಲ್ಲಿ ಅವರು ಭಕ್ತಿಗೀತೆಗಳನ್ನು ಹಾಡಿದರು. ಆಗ ಅಲ್ಲಿದ್ದವರೆಲ್ಲ ಭಕ್ತಿಭಾವದಲ್ಲಿ ಮಿಂದೆದ್ದರು.




ಮುಂದೆ ಒಂದು ದಿನ, ರಾತ್ರಿಹೊತ್ತು ಅಘೋರಮಣಿ ಸಾಧನೆಯಲ್ಲಿ ನಿರತಳಾಗಿದ್ದಳು. ಇದ್ದಕ್ಕಿದ್ದಂತೆ ತನ್ನ ಬಳಿ ಶ್ರೀರಾಮಕೃಷ್ಣರು ಕುಳಿತುಕೊಂಡಿದ್ದುದನ್ನು ಕಂಡು ಅವಳಿಗೆ ಆಶ್ಚರ್ಯವಾಯಿತು. ನಿಧಾನವಾಗಿ ಅವರ ಮೂರ್ತಿ ಬಾಲಗೋಪಾಲನಾಗಿ ಪರಿವರ್ತನೆ ಹೊಂದಿತು. ಆಗ ಅವಳಿಗರ್ಥವಾಯಿತು, ಶ್ರೀರಾಮಕೃಷ್ಣರೇ ತನ್ನ ಬಾಲಗೋಪಾಲ ಎಂಬುದಾಗಿ.

**10**

ಅವಳಿಗೆ ಆ ಆಧ್ಯಾತ್ಮಿಕ ಅನುಭವವು ಅತ್ಯಂತ ಆನಂದವನ್ನು ನೀಡಿತು. ಅವಳು ಎಲ್ಲವನ್ನೂ ಮರೆತು, 'ಗೋಪಾಲ' ಎಂದು ಕೂಗುತ್ತ ದಕ್ಷಿಣೇಶ್ವರದತ್ತ ಧಾವಿಸಿದಳು.



**11**

ಅವಳು ದಕ್ಷಿಣೇಶ್ವರವನ್ನು ತಲುಪಿದಾಗ ಶ್ರೀರಾಮಕೃಷ್ಣರಿಗೆ ಗೋಪಾಲನ ಭಾವ ಮೂಡಿ ಬಂತು. ಅವರು ಬಾಲಗೋಪಾಲನಂತೆ ಅಂಬೆಗಾಲಿಡುತ್ತ ಬಂದು, ಅವಳ ಮಡಿಲಲ್ಲಿ ಕುಳಿತರು. ಆನಂದ ಬಾಷ್ಪಗಳೊಂದಿಗೆ ಅವಳು ತಾನು ತಂದಿದ್ದ ತಿನಿಸುಗಳನ್ನು ಅವರಿಗೆ ತಿನ್ನಿಸಿದಳು.




**12**

ಅಘೋರಮಣಿ ಅತ್ಯುನ್ನತವಾದ ಆಧ್ಯಾತ್ಮಿಕ ಹಂತವನ್ನು ತಲುಪಿದಳು. ಅವಳು ಭಾವಾವೇಶದಲ್ಲಿ ಶ್ರೀರಾಮಕೃಷ್ಣರ ದೇಹದಿಂದ ಬಾಲಗೋಪಾಲನು ಹೊರಬಂದಂತೆ, ಹಾಗೂ ಅವರನ್ನೇ ಪ್ರವೇಶಿಸುವಂತೆ ಕಂಡಳು. ಅವಳು ಆನಂದದಿಂದ ತುಂಬಿತುಳುಕಾಡಿದಳು. ಅವಳನ್ನು ಶ್ರೀರಾಮಕೃಷ್ಣರು ಮತ್ತೆ ಸಾಮಾನ್ಯ ಸ್ಥಿತಿಗೆ ತಂದರು.

**13**



**14**

ಒಂದು ಸಲ ಅಘೋರಮಣಿ ತನ್ನ ಆಧ್ಯಾತ್ಮಿಕ ಅನುಭವಗಳನ್ನು ಯುವಕ ನರೇಂದ್ರನಿಗೆ ತಿಳಿಸಿದಳು. ಆಗ ನರೇಂದ್ರನಿಗೆ ಸಾಕಾರ ದೇವರಲ್ಲಿ ನಂಬಿಕೆಯಿಲ್ಲದಿದ್ದರೂ, ಅವಳ ಅನುಭವಗಳನ್ನು ಕೇಳಿದಾಗ ಅವನು ಭಾವಪೂರಿತನಾಗಿ ಕಣ್ಣೀರು ಸುರಿಸಿದ. ಅವಳು ಅವನಿಗೆ ಹೇಳಿದಳು ...



**15**




**16**



ತನ್ನ ಕೊನೆಯ ದಿನಗಳಲ್ಲಿ ಅಘೋರಮಣಿ ಶ್ರೀ ಜಗನ್ನಾಥನ ರಥೋತ್ಸವವನ್ನು ನೋಡಲು ಪುರೀಧಾಮಕ್ಕೆ ಹೋದಳು. ರಥದ ಮೇಲೆ ಜಗನ್ನಾಥನ ಬದಲು ಅವಳು ಬಾಲಗೋಪಾಲನನ್ನು ಕಂಡಳು. ಅದೇ ರೀತಿ ಅವಳು ಬಾಲಗೋಪಾಲನನ್ನು ಎಲ್ಲೆಲ್ಲಿಯೂ ಕಂಡಳು. ಅವಳಿಗೆ ಅವನ ವಿಶ್ವರೂಪ ದರ್ಶನವಾಯಿತು.

**17**

ಯಶೋದೆಯಂತೆ ಗೋಪಾಲನನ್ನು ತನ್ನ ಮಗುವೆಂದೇ ಭಾವಿಸುವ ಭಕ್ತಿಗೆ ಅವಳು ಅತ್ಯುತ್ತಮ ಉದಾಹರಣೆಯಾದಳು. ಶ್ರೀರಾಮಕೃಷ್ಣರ ನೇರ ಶಿಷ್ಯರೆಲ್ಲರೂ ಅವಳನ್ನು ಗೌರವಿಸುತ್ತಿದ್ದರು. ಅವಳ ಕೊನೆಯ ದಿನಗಳಲ್ಲಿ ಸೋದರಿ ನಿವೇದಿತಾ ಅವಳ ಸೇವೆ ಮಾಡಿದಳು. ಬಾಲಗೋಪಾಲನ ತಾಯಿ, ಈ ಯುಗದ ಯಶೋದೆ 8.07.1906 ರಂದು ಶ್ರೀರಾಮಕೃಷ್ಣರ ಪಾದಗಳನ್ನು ಸೇರಿದಳು.



# ರಾಮಕೃಷ್ಣ ಮಿಷನ್ ಆಡಳಿತ ಮಂಡಳಿಯ ವಾರ್ಷಿಕ ವರದಿಯ ಸಾರಾಂಶ - 2017-2018

ರಾಮಕೃಷ್ಣ ಮಿಷನ್ ಆಡಳಿತ ಮಂಡಳಿಯ **೧೦೯-ನೇ ವಾರ್ಷಿಕ ಸಾಧಾರಣ ಸಭೆಯು** ರವಿವಾರ, ದಿನಾಂಕ ೧೬ನೇ ಡಿಸೆಂಬರ್ ೨೦೧೮ ರಂದು ಮಧ್ಯಾಹ್ನ ೩.೩೦ ಕ್ಕೆ ಬೇಲೂರು ಮಠದಲ್ಲಿ ನೆರವೇರಿತು. ಅದರ ಸಂಕ್ಷಿಪ್ತ ವರದಿ ಈ ಕೆಳಗಿನಂತಿದೆ:

೨೦೧೭-೧೮ರ ಅವಧಿಯಲ್ಲಿ ರಾಮಕೃಷ್ಣ ಮಿಷನ್ ಹಾಗೂ ರಾಮಕೃಷ್ಣ ಮಠ ಹಾಗೂ ಅವುಗಳ ಶಾಖಾಕೇಂದ್ರಗಳಿಗೆ ನೀಡಲಾದ ಪ್ರಧಾನವಾದ ಕೆಲವು ಪ್ರಶಸ್ತಿಗಳು ಹೀಗಿವೆ: ೧) **ರಾಂಚಿ ಮೊರಾಬಾದಿ** ಆಶ್ರಮದ ದಿವ್ಯಾಯನ ಕೃಷಿ ವಿಜ್ಞಾನ ಕೇಂದ್ರಕ್ಕೆ ನವದೆಹಲಿಯಲ್ಲಿರುವ ಭಾರತೀಯ ಕೃಷಿ ಸಂಶೋಧನ ಮಂಡಲಿಯು ರಾಷ್ಟ್ರೀಯ ಹಂತದ **ಪಂಡಿತ್ ದೀನದಯಾಳ ಉಪಾಧ್ಯಾಯ ರಾಷ್ಟ್ರೀಯ ಕೃಷಿ ವಿಜ್ಞಾನ ಪ್ರೋತ್ಸಾಹನ ಪುರಸ್ಕಾರವನ್ನು** ನೀಡಿದೆ. ೨) ಲಂಡನ್ನಿನಲ್ಲಿರುವ **ವರ್ಲ್ಡ್ ಬುಕ್ ಆಫ್ ರೆಕಾರ್ಡ್ಸ್** ನಲ್ಲಿ **ರಾಮಕೃಷ್ಣ ಮಠ** ಹಾಗೂ **ರಾಮಕೃಷ್ಣ ಮಿಷನ್** ಧರ್ಮ ಸಮನ್ವಯಕ್ಕಾಗಿ ದುಡಿಯುವ ಆಧ್ಯಾತ್ಮಿಕ ಚಳುವಳಿ ಎಂದು ದಾಖಲಿಸಿದೆ. ೩) **ಕಾಮಾರಪುಕುರ** ಶಾಲೆ ಹಾಗು **ನರೇಂದ್ರಪುರ** ವಿದ್ಯಾಲಯವು ಪಶ್ಚಿಮ ಬಂಗಾಳ ಸರ್ಕಾರದ ಶಾಲೆ ಹಾಗೂ ಶಿಕ್ಷಣ ವಿಭಾಗದ ವತಿಯಿಂದ **ಅತ್ಯುತ್ತಮ ಶಾಲೆ ಪ್ರಶಸ್ತಿಯನ್ನು** ಗಳಿಸಿವೆ. ೪) ಅಖಿಲ ಭಾರತ ಸ್ವಚ್ಛತಾ ರ್‍ಯಾಂಕಿಂಗ್‌ನಲ್ಲಿ **ಚೆನ್ನೈ ವಿದ್ಯಾಪೀಠದ** ವಿವೇಕಾನಂದ ಕಾಲೇಜು ಮೂರನೆಯ ಸ್ಥಾನವನ್ನು ಗಳಿಸಿದೆ.

**ಸ್ವಾಮಿ ಅಭೇದಾನಂದರ ೧೫೦ನೇ ಜನ್ಮ ಶತಮಾನೋತ್ಸವದ** ಅಂಗವಾಗಿ ರಾಮಕೃಷ್ಣ ಮಠ ಹಾಗೂ ಮಿಷನ್ನಿನ ವಿವಿಧ ಶಾಖಾಕೇಂದ್ರಗಳಲ್ಲಿ *'ಭಾರತೀಯ ಸಂಸ್ಕೃತಿ ಹಾಗೂ ತತ್ತ್ವಶಾಸ್ತ್ರ'* ಎಂಬ ವಿಷಯವನ್ನು ಕುರಿತ ನಾಲ್ಕು ರಾಷ್ಟ್ರೀಯ ವಿಚಾರ ಸಂಕಿರಣಗಳು ಹಾಗೂ ಇನ್ನಿತರ ಹಲವು ಕಾರ್ಯಕ್ರಮಗಳು ನಡೆದವು.

**ಸೋದರಿ ನಿವೇದಿತಾ ಅವರ ೧೫೦ನೇ ಜನ್ಮ ಶತಮಾನೋತ್ಸವವನ್ನು** ಬೇಲೂರು ಮಠದ ಪ್ರಧಾನಕೇಂದ್ರದಲ್ಲಿ ಹಾಗೂ ಇನ್ನಿತರ ಅನೇಕ ಶಾಖಾಕೇಂದ್ರಗಳಲ್ಲಿ ಆಚರಿಸಲಾಯಿತು. ಈ ಸಂಬಂಧವಾಗಿ ನಡೆದ ೧೧೫ ವಿಚಾರ ಸಂಕಿರಣಗಳಲ್ಲಿ ಸುಮಾರು ೫೫,೦೦೦ ಮಂದಿ ಪಾಲ್ಗೊಂಡಿದ್ದರು, ಹಾಗೂ ಸಾಂಸ್ಕೃತಿಕ ಸ್ಪರ್ಧೆಗಳಲ್ಲಿ ೫೦,೦೦೦ ಮಂದಿ ವಿದ್ಯಾರ್ಥಿಗಳು ಭಾಗವಹಿಸಿದ್ದರು. ವಿವಿಧ ಭಾಷೆಗಳಲ್ಲಿ ಸೋದರಿ ನಿವೇದಿತಾ ಕುರಿತು ಹೊಸ ಪುಸ್ತಕಗಳು ಕೂಡ ಪ್ರಕಟಗೊಂಡವು.

ರಾಮಕೃಷ್ಣ ಮಿಷನ್ನಿನ ಈ ಕೆಲವು ಹೊಸ ಶಾಖಾಕೇಂದ್ರಗಳು ಆರಂಭಗೊಂಡವು: ೧) **ಗೋವಾ** ೧) **ಲಮ್‌ಡಂಗ್**, ಅರುಣಾಚಲ ಪ್ರದೇಶ, ೩) **ಝಾರ್‌ಗ್ರಾಮ**, ಪಶ್ಚಿಮ ಬಂಗಾಳ ೪) **ನ್ಯೂ ಟೌನ್**, ಕೊಲ್ಕತ್ತಾ ೫) **ದಾವಣಗೆರೆ**, ಕರ್ನಾಟಕ ಹಾಗೂ ೬) **ದಿಬ್ರೂಘರ್**, ಅಸ್ಸಾಂ. ಉತ್ತರ ಪ್ರದೇಶದ **ಅಯೋಧ್ಯೆ**ಯಲ್ಲಿ ಲಕ್ನೋ ಮಿಷನ್ ಸೇವಾಶ್ರಮದ ಉಪ-ಶಾಖಾಕೇಂದ್ರವನ್ನು ಆರಂಭಿಸಲಾಯಿತು.

**ಶೈಕ್ಷಣಿಕ ಕ್ಷೇತ್ರದಲ್ಲಿ** ಈ ಕೆಳಗಿನ **ಹೊಸ ಪ್ರಗತಿಗಳು** ಉಲ್ಲೇಖನೀಯ:

(೧) NAAC ಸಂಸ್ಥೆಯು **ಕೊಯಮತ್ತೂರು ಮಿಷನ್** ಕೇಂದ್ರದ ಕಾಲೇಜ್ ಆಫ್ ಎಜುಕೇಶನ್‌ಗೆ A++ ಹಾಗೂ **ಚೆನ್ನೈ ವಿದ್ಯಾಪೀಠಕ್ಕೆ** A+ ಸ್ಥಾನವನ್ನು ನೀಡಿತು. ೨) UGC ಸಂಸ್ಥೆಯು **ರಹರಾ** ಕೇಂದ್ರದ ವಿವೇಕಾನಂದ ಸೆಂಟನರಿ ಕಾಲೇಜಿಗೆ ಸ್ವಾಯತ್ತ ಸ್ಥಾನವನ್ನು ಆರು ವರ್ಷಗಳ ಕಾಲ ನೀಡಿತು. ೩) **ವಿಶಾಖಪಟ್ಟಣಂ** ಕೇಂದ್ರವು ಪ್ರಧಾನವಾಗಿ ಯುವಜನತೆಗೆ ಜೀವನೋನ್ನತಿ ತರಗತಿಗಳನ್ನು ನಡೆಸುವ *ವಿವೇಕ್ ಇನ್‌ಸ್ಟಿಟ್ಯೂಟ್ ಆಫ್ ಎಕ್ಸೆಲೆನ್ಸ್* ಅನ್ನು ಆರಂಭಿಸಿದೆ. ೪) **ಕೊಯಮತ್ತೂರು, ವಿಜಯವಾಡ** ಹಾಗೂ **ವಿಶಾಖಪಟ್ಟಣಂ** ಕೇಂದ್ರಗಳು ತಮ್ಮ ಶಾಲೆಗಳಲ್ಲಿ ಸ್ಮಾರ್ಟ್ ಕ್ಲಾಸ್‌ರೂಂ ಸೇವೆಯನ್ನು ಆರಂಭಿಸಿವೆ.

**ವೈದ್ಯಕೀಯ ಕ್ಷೇತ್ರದಲ್ಲಿ** ಈ ಕೆಳಗಿನ **ಹೊಸ ಬೆಳವಣಿಗೆಗಳು** ಉಲ್ಲೇಖನೀಯ:

(೧) **ಇಟಾನಗರ** ಕೇಂದ್ರವು ನಾಲ್ಕು ಹೊಸ ವಿಭಾಗಗಳನ್ನು ಆರಂಭಿಸಿತು: Oncology, ಪ್ಲಾಸ್ಟಿಕ್ ಸರ್ಜರಿ, ಕಾರ್ಡಿಯಾಲಜಿ ಹಾಗೂ ಆಯುರ್ವೇದ.(೨) NABH (National Accreditation Board for Hospitals & Healthcare Providers) ಸಂಸ್ಥೆಯು **ಲಕ್ನೋ** ಕೇಂದ್ರದ ಆಸ್ಪತ್ರೆಗೆ ಮೂರು ವರ್ಷಗಳ ಅವಧಿಗೆ ಅಂಗೀಕಾರ ನೀಡಿದೆ. ೩) **ವೃಂದಾವನ** ಕೇಂದ್ರದ ಆಸ್ಪತ್ರೆಯಲ್ಲಿ ಕಾರ್ಡಿಕ್ ಕ್ಯಾಥೆಟರೈಸೇಶನ್ ಲ್ಯಾಬೋರೇಟರಿ ಮತ್ತು ಕ್ಯಾನ್ಸರ್ ಸೆಂಟರ್‌ಗಳನ್ನು ಆರಂಭಿಸಲಾಯಿತು. ೪) **ವಾರಣಾಸಿ ಹೋಮ್ ಆಫ್ ಸರ್ವಿಸ್**‌ನಲ್ಲಿ ಡೆಂಟಲ್ ಹಾಗೂ ಡಯಾಲಿಸಿಸ್ ಕೇಂದ್ರಗಳನ್ನು ಹಾಗೂ ಒಂದು ಔಷಧಾಲಯವನ್ನು ಆರಂಭಿಸಲಾಯಿತು. ೫) ನಮ್ಮ ಹಲವು ಆಸ್ಪತ್ರೆಗಳು ಮತ್ತು ಔಷಧಕೇಂದ್ರಗಳಲ್ಲಿ ಆಯಾ ಡಯಾಗ್ನಸ್ಟಿಕ್ ಲ್ಯಬೋರೇಟರಿಗಳಲ್ಲಿ ಹೊಸ **ಮೆಡಿಕಲ್ ಇಕ್ವಿಪ್‌ಮೆಂಟ್**‌ಗಳನ್ನು ಸೇರಿಸಲಾಗಿದೆ.

**ಗ್ರಾಮೀಣಾಭಿವೃದ್ಧಿ ಕ್ಷೇತ್ರದಲ್ಲಿ ಈ ಕೆಳಗಿನ ಹೊಸ ಯೋಜನೆಗಳು** ಉಲ್ಲೇಖನೀಯ:

(೧) **ಚೆನ್ನೈ ಸ್ಟುಡೆಂಟ್ಸ್ ಹೋಮ್** ತಮಿಳುನಾಡಿನ ತಿರುವಳ್ಳುವರ್ ಜಿಲ್ಲೆಯ ಪೂವಲಂಬೇಡು ಗ್ರಾಮದಲ್ಲಿ ಒಂದು ಸಾರ್ವಜನಿಕ ಭವನವನ್ನು ನಿರ್ಮಿಸಿಕೊಟ್ಟಿದೆ. ೨) **ರಾಂಚಿ ಮೊರಾಬಾದಿ** ಕೇಂದ್ರವು ೬೯೯ ಹೆಕ್ಟೇರ್ ಪ್ರದೇಶಗಳಲ್ಲಿ ನೀರಿನ ಶೆಡ್‌ಗಳನ್ನು ನಿರ್ಮಿಸಿದೆ. ಸುಗಂಧಭರಿತವಾದ ಅಕ್ಕಿಯ ಸಂರಕ್ಷಣೆಗಾಗಿ ಎರಡು ಯೋಜನೆಗಳನ್ನೂ ಈ ಕೇಂದ್ರವು ಆರಂಭಿಸಿದೆ. ರೈತರಿಗೆ ತರಬೇತಿ ನೀಡಿ ಭತ್ತದ ಬಿತ್ತನೆಯನ್ನು ಉತ್ಪಾದಿಸುವ 'ಗ್ರಾಮ ಬಿತ್ತನೆ ಕಾರ್ಯಕ್ರಮ'ವನ್ನೂ ಈ ಕೇಂದ್ರ ಆರಂಭಿಸಿದೆ. ಈ ಕಾರ್ಯಕ್ರಮದಲ್ಲಿ ೨೫ ಗ್ರಾಮಗಳಿಂದ ಬಂದ ರೈತರು ಭಾಗವಹಿಸಿ, ೧೦೨೫ ಕ್ವಿಂಟಾಲ್ ಭತ್ತದ ಬಿತ್ತನೆಯನ್ನು ಉತ್ಪಾದಿಸಿದರು.

ಹಲವಾರು ಶಾಖಾಕೇಂದ್ರಗಳು *ಸ್ವಚ್ಛ ಭಾರತ ಅಭಿಯಾನ*ವನ್ನು ಸ್ವಚ್ಛತಾ ಕಾರ್ಯಕ್ರಮ ಹಾಗೂ ಅರಿವು ನೀಡುವ ಕಾರ್ಯಕ್ರಮಗಳೊಂದಿಗೆ ಮುಂದುವರೆಸಿವೆ. ಅವುಗಳಲ್ಲಿ ವಿಶೇಷ ಉಲ್ಲೇಖ ಮಾಡಬೇಕಾದದ್ದು — **ಮಂಗಳೂರು** ಆಶ್ರಮವು ಈ ಕೆಳಗಿನ ಕಾರ್ಯಗಳನ್ನು ನಡೆಸಿತು: ೧) ಮಂಗಳೂರು ನಗರದ ಸುತ್ತಮುತ್ತ ೧೮೪ ಸ್ವಚ್ಛತಾ ಕಾರ್ಯಕ್ರಮಗಳು. ೨) ದಕ್ಷಿಣ ಕನ್ನಡ ಜಿಲ್ಲೆಯ ೩೩೨ ಹಳ್ಳಿಗಳಲ್ಲಿ ಸ್ವಚ್ಛತಾ ಕಾರ್ಯಕ್ರಮಗಳು. ೩) ೧೧೦ ಶಾಲೆಗಳಲ್ಲಿ ೪೨೬ ಅರಿವು ನೀಡುವ ಕಾರ್ಯಕ್ರಮಗಳು; ಇದರಲ್ಲಿ ೪೪,೦೦೦ ವಿದ್ಯಾರ್ಥಿಗಳು ಪಾಲ್ಗೊಂಡರು.

**ರಾಮಕೃಷ್ಣ ಮಠಕ್ಕೆ ಸಂಬಂಧಿಸಿದಂತೆ ಈ ಕೆಳಗಿನ ಹೊಸ ಯೋಜನೆಗಳು ಉಲ್ಲೇಖನೀಯ:**

೧) **ಆಂಟ್‌ಪುರ್** ಹಾಗೂ **ನಾಗಪುರ** ಕೇಂದ್ರಗಳಲ್ಲಿ ಹೊಸ ಡಿಸ್ಪೆನ್ಸರಿ ಕಟ್ಟಡಗಳ ನಿರ್ಮಾಣ. ೨) **ಕೂಚ್‌ಬಿಹಾರ್** ಮತ್ತು **ರಾಜ್‌ಕೋಟ್** ಕೇಂದ್ರಗಳು ತಮ್ಮ ವೈದ್ಯಕೀಯ ಘಟಕದಲ್ಲಿ ಹೊಸ ಮಹಡಿಯೊಂದನ್ನು ಸೇರಿಸಿವೆ. ೩) **ನಟ್ಟರಾಂಪಳ್ಳಿ** ಕೇಂದ್ರವು ಶಾಲಾ ಕಟ್ಟಡದಲ್ಲಿ ಹೊಸ ಸಂಕೀರ್ಣವನ್ನು ನಿರ್ಮಿಸಿದೆ. ೪) **ಬಾಗ್ದಾ** ಕೇಂದ್ರದಲ್ಲಿ ಕೋಚಿಂಗ್ ಹಾಗೂ ವೊಕೇಶನಲ್ ತರಬೇತಿ ಕೇಂದ್ರನ್ನು ಆರಂಭಿಸಲಾಗಿದೆ.

**ಭಾರತದ ಹೊರಗೆ ಈ ಕೆಳಗಿನ ಹೊಸ ಯೋಜನೆಗಳು ವಿಶೇಷವಾಗಿ ಉಲ್ಲೇಖನೀಯ:**

೧) **ಜೆಸ್ಸೂರ್** ಕೇಂದ್ರದಲ್ಲಿ (ಬಾಂಗ್ಲಾದೇಶ) ಹೊಸದಾಗಿ ನಿರ್ಮಿಸಲಾದ ಶ್ರೀ ರಾಮಕೃಷ್ಣ ಮಂದಿರದ ಉದ್ಘಾಟನೆ ನೆರವೇರಿತು. ೨) **ಫೀನಿಕ್ಸ್** (ದಕ್ಷಿಣ ಆಫ್ರಿಕಾ) ಕೇಂದ್ರವು ಅಲ್ಲಿನ ಇನಾಂದಾದಲ್ಲಿರುವ ಸಂತ್ರಸ್ತ ರೋಗಿಗಳಿಗೋಸ್ಕರ ಅಡುಗೆ ಮನೆ ಹಾಗೂ ಭೋಜನಾಲಯವನ್ನು ನಿರ್ಮಿಸಿಕೊಟ್ಟಿದೆ. ೩) **ಢಾಕಾ** (ಬಾಂಗ್ಲಾದೇಶ) ಕೇಂದ್ರವು ತನ್ನ ಶತಮಾನೋತ್ಸವವನ್ನು ನೆರವೇರಿಸಿತು; ಹಾಗೂ **ಸಿಂಗಾಪುರ** ಕೇಂದ್ರದ ಕಿಂಡರ್‌ಗಾರ್ಟನ್ ತನ್ನ ರಜತ ಮಹೋತ್ಸವವನ್ನು ನೆರವೇರಿಸಿತು.

ದೇಶದ ವಿವಿಧ ಭಾಗಗಳಲ್ಲಿ ಹಲವಾರು **ಪರಿಹಾರ ಮತ್ತು ಪುನರ್ವಸತಿ ನಿರ್ಮಾಣ** ಕಾರ್ಯಗಳನ್ನು ಹಮ್ಮಿಕೊಳ್ಳಲಾಯಿತು. ಸುಮಾರು ೪೪ ಕೋಟಿ ರೂಪಾಯಿಗಳ ವೆಚ್ಚದಲ್ಲಿ ನಡೆದ ಈ ಕಾರ್ಯಗಳಿಂದ ೧೦.೫೩ ಲಕ್ಷ ಜನರು ನೆರವನ್ನು ಪಡೆದಿದ್ದಾರೆ.

ಈ ವರ್ಷದ ಅವಧಿಯಲ್ಲಿ ರಾಮಕೃಷ್ಣ ಮಿಷನ್ ಕೈಗೊಂಡ **ಸಮಾಜ ಕಲ್ಯಾಣ ಕಾರ್ಯಕ್ರಮಗಳ** ಅಡಿಯಲ್ಲಿ ಬಡ ವಿದ್ಯಾರ್ಥಿಗಳಿಗೆ ವಿದ್ಯಾರ್ಥಿವೇತನ, ವೃದ್ಧರಿಗೆ, ರೋಗಿಗಳಿಗೆ ಹಾಗೂ ನಿರ್ಗತಿಕರಿಗೆ ಆರ್ಥಿಕ ನೆರವು ಇತ್ಯಾದಿಗಳನ್ನು ನೀಡಲಾಯಿತು. ಇವುಗಳಿಗೆ ೧೭ ಕೋಟಿ ರೂಪಾಯಿಗಳು ವಿನಿಯೋಗವಾಗಿವೆ.

**ವೈದ್ಯಕೀಯ ಸೇವೆ**ಗಳನ್ನು ೭೨.೭೪ ಲಕ್ಷಕ್ಕಿಂತ ಹೆಚ್ಚು ಜನರಿಗೆ ೧೦ ಆಸ್ಪತ್ರೆಗಳು, ೮೦ ಚಿಕಿತ್ಸಾಲಯಗಳು, ೪೦ ಸಂಚಾರಿ ವೈದ್ಯಕೀಯ ಘಟಕಗಳು ಹಾಗೂ ೯೨೮ ವೈದ್ಯಕೀಯ ಶಿಬಿರಗಳ ಮೂಲಕ ನೀಡಲಾಯಿತು. ಇದಕ್ಕೆ ೨೨೭ ಕೋಟಿ ರೂಪಾಯಿಗಳನ್ನು ವ್ಯಯ ಮಾಡಲಾಗಿದೆ.

ಶಿಶುವಿಹಾರದಿಂದ ಹಿಡಿದು ವಿಶ್ವವಿದ್ಯಾಲಯದವರೆಗಿರುವ ನಮ್ಮ ವಿದ್ಯಾಸಂಸ್ಥೆಗಳಲ್ಲಿ, ಹಾಗೂ ಅಸಾಂಪ್ರದಾಯಿಕ ಶಿಕ್ಷಣ ವಿಭಾಗಗಳು, ರಾತ್ರಿ ಶಾಲೆಗಳು, ಖಾಸಗಿ ತರಗತಿಗಳು ಇತ್ಯಾದಿಗಳಲ್ಲಿ ಸುಮಾರು ೨.೩೧ ಲಕ್ಷ ವಿದ್ಯಾರ್ಥಿ-ವಿದ್ಯಾರ್ಥಿನಿಯರು ಶಿಕ್ಷಣ ಪಡೆಯುತ್ತಿದ್ದಾರೆ. ಈ **ಶೈಕ್ಷಣಿಕ ಕಾರ್ಯಕ್ರಮ**ಗಳಿಗೆ ಒಟ್ಟು ೩೨೪ ಕೋಟಿ ರೂಪಾಯಿಗಳು ವಿನಿಯೋಗವಾಗಿವೆ.

**ಗ್ರಾಮೀಣ ಹಾಗೂ ಬುಡಕಟ್ಟು ಜನಾಂಗದವರಿಗಾಗಿ** ನಡೆಸಿದ ಹಲವಾರು **ಅಭಿವೃದ್ಧಿ ಯೋಜನೆ**ಗಳಿಗೆ ೭೧ ಕೋಟಿ ರೂಪಾಯಿಗಳನ್ನು ವ್ಯಯ ಮಾಡಲಾಯಿತು. ಸುಮಾರು ೪೨.೮೬ ಲಕ್ಷ ಜನರು ಇದರ ಲಾಭ ಪಡೆದರು.

ಈ ಸಂದರ್ಭದಲ್ಲಿ ರಾಮಕೃಷ್ಣ ಮಿಷನ್ ಮತ್ತು ರಾಮಕೃಷ್ಣ ಮಠದ ಎಲ್ಲ ಸೇವಾಕಾರ್ಯಗಳನ್ನು ಮುನ್ನಡೆಸಲು ನೆರವಾದ ಸಂಸ್ಥೆಯ ಎಲ್ಲ ಸದಸ್ಯರಿಗೂ, ಸ್ನೇಹಿತರಿಗೂ ನಮ್ಮ ಹೃತ್ಪೂರ್ವಕ ಧನ್ಯವಾದಗಳನ್ನು ಸಮರ್ಪಿಸುತ್ತೇವೆ.

(ಸ್ವಾಮಿ ಸುವೀರಾನಂದ)

೧೬ ಡಿಸೆಂಬರ್, ೨೦೧೮ — ಪ್ರಧಾನ ಕಾರ್ಯದರ್ಶಿ








# ಬೆಂಗಳೂರು ಶ್ರೀರಾಮಕೃಷ್ಣ ವಿದ್ಯಾರ್ಥಿ ಮಂದಿರಂ ಅಮೃತ ಮಹೋತ್ಸವ

ಬೆಂಗಳೂರು ರಾಮಕೃಷ್ಣ ಮಠದ ಅಂಗಸಂಸ್ಥೆಯಾದ **ಶ್ರೀರಾಮಕೃಷ್ಣ ವಿದ್ಯಾರ್ಥಿ ಮಂದಿರ**ವು ತನ್ನ ಅಮೃತ ಮಹೋತ್ಸವವನ್ನು ೨೦೧೮ರ ನವೆಂಬರ್ ೨೩ ರಿಂದ ೨೫ರ ವರೆಗೆ ಸಡಗರದಿಂದ ಆಚರಿಸಿತು. ವಿವಿಧ ಪ್ರವಚನಗಳು, ಚರ್ಚಾಗೋಷ್ಠಿ ಹಾಗೂ ಸಾಂಸ್ಕೃತಿಕ ಕಾರ್ಯಕ್ರಮಗಳನ್ನೊಳಗೊಂಡ ಈ ಮಹೋತ್ಸವದಲ್ಲಿ ಹಲವು ಮಂದಿ ಸ್ವಾಮೀಜಿಯವರು, ಹಿಂದಿನ ವಾರ್ಡನ್‌ಗಳು ಹಾಗೂ ಇನ್ನಿತರ ಗಣ್ಯರು ಭಾಗವಹಿಸಿದ್ದರು. ಸಮಾಜದ ವಿವಿಧ ಸ್ತರಗಳಿಗೆ ಸೇರಿದ ಜನಸಮುದಾಯದೊಂದಿಗೆ ನಡೆಸಿದ ಸಂವಾದ ಹಾಗೂ ಸಮ್ಮಿಲನಗಳು ಈ ಕಾರ್ಯಕ್ರಮದ ಯಶಸ್ಸಿಗೆ ಕಾರಣವಾಯಿತು.

**ಮೊದಲನೆಯ ದಿನ :** ೨೦೧೮ರ ನವೆಂಬರ್ ೨೩ರಂದು ನಡೆದ **ಉದ್ಘಾಟನಾ ಸಮಾರಂಭ**ವನ್ನು ರಾಮಕೃಷ್ಣ ಮಠ ಹಾಗೂ ಮಿಷನ್ನಿನ ಉಪಾಧ್ಯಕ್ಷರಾದ **ಸ್ವಾಮಿ ಗೌತಮಾನಂದಜಿ ಮಹಾರಾಜ್**‌ನೆರವೇರಿಸಿದರು. ಸ್ವಾಮಿ ವಿವೇಕಾನಂದರ ಚಿಕಾಗೋ ಉಪನ್ಯಾಸಗಳ ೧೨೫ನೇ ವಾರ್ಷಿಕೋತ್ಸವನ್ನು ಆಚರಿಸುವ ಸಲುವಾಗಿ ನಡೆಸಲಾದ **ಯುವ ಸಮ್ಮೇಳನ**ದಲ್ಲಿ ೧೬೦೦ ಮಂದಿ ಕಾಲೇಜು ವಿದ್ಯಾರ್ಥಿಗಳು ಭಾಗವಹಿಸಿದ್ದರು. ವಿಜ್ಞಾನ ಮತ್ತು ಅಧ್ಯಾತ್ಮವನ್ನು ಕುರಿತಂತೆ ಹಲವು ಭಾಷಣಗಳು ನಡೆದವು. ಸಾಯಂಕಾಲ **ಪಂಡಿತ್ ಸುರೇಶ್ ವಾಡ್‌ಕರ್** ಅವರಿಂದ **ಭಜನ್ ಸಂಧ್ಯಾ** ನಡೆಯಿತು.

**ಎರಡನೆಯ ದಿನ :** ನವಂಬರ್ ೨೪ರಂದು ವಿದ್ಯಾರ್ಥಿನಿಲಯದ ವಿದ್ಯಾರ್ಥಿಗಳಿಗಾಗಿ ಮತ್ತು ಆಡಳಿತಗಾರರಿಗೆ ವಿಶೇಷ ಕಾರ್ಯಕ್ರಮ ನಡೆಯಿತು. ಇದರಲ್ಲಿ ೧೭೦೦ ಮಂದಿ ವಿದ್ಯಾರ್ಥಿಗಳು, ಪಾಲಕರು ಹಾಗೂ ಮೇಲ್ವಿಚಾರಕರು, ಸರ್ಕಾರಿ ಪದಾಧಿಕಾರಿಗಳು ಭಾಗ ವಹಿಸಿದ್ದರು. '**ಮಾನವ ನಿರ್ಮಾಣ ಹಾಗೂ ರಾಷ್ಟ್ರನಿರ್ಮಾಣದಲ್ಲಿ ವಿದ್ಯಾರ್ಥಿನಿಲಯಗಳ ಪಾತ್ರ**' ಎಂಬ ಅಂಶವು ಈ ಕಾರ್ಯಕ್ರಮಗಳಲ್ಲಿ ಪ್ರಧಾನವಾಗಿ ಬಿಂಬಿಸಲ್ಪಟ್ಟ ಅಂಶವಾಗಿತ್ತು. ವಿದ್ಯಾರ್ಥಿನಿಲಯಗಳ ನಿರ್ವಹಣೆ, ಸಮಸ್ಯೆ ಹಾಗೂ ಪರಿಹಾರಗಳನ್ನು ಕುರಿತು ಚರ್ಚೆ ಕೂಡ ನಡೆಯಿತು. ಸಾಯಂಕಾಲ ಅಂತರರಾಷ್ಟ್ರೀಯ ಖ್ಯಾತಿಯ ಸಿತಾರ್ ವಾದಕರಾದ **ಪಂಡಿತ್ ನೀಲಾದ್ರಿಕುಮಾರ್** ಅವರಿಂದ ಸಂಗೀತ ಕಾರ್ಯಕ್ರಮ ನಡೆಯಿತು.

**ಕೊನೆಯ ದಿನ :** ನವೆಂಬರ್ ೨೫ರಂದು ವಿದ್ಯಾರ್ಥಿಮಂದಿರದ ಹಳೆಯ ವಿದ್ಯಾರ್ಥಿಗಳ ಸಭೆ ನಡೆಯಿತು. ಸುಮಾರು ೩೦೦ ಮಂದಿ ಹಳೆಯ ವಿದ್ಯಾರ್ಥಿಗಳು ಈ ಸಭೆಯಲ್ಲಿ ಭಾಗವಹಿಸಿದ್ದರು. **ಸಮಾರೋಪ ಸಮಾರಂಭ**ದಲ್ಲಿ ರಾಮಕೃಷ್ಣ ಮಠ-ಮಿಷನ್ನಿನ ಪ್ರಧಾನ ಕಾರ್ಯದರ್ಶಿಗಳಾದ **ಸ್ವಾಮಿ ಸುವೀರಾನಂದಜಿ ಮಹಾರಾಜ್** ಅವರು ಭಾಗವಹಿಸಿ ಮಾತನಾಡಿದರು. ಸ್ವಾಮಿ ರಾಘವೇಶಾನಂದಜಿ ಹಾಗೂ ಸ್ವಾಮಿ ಹರ್ಷಾನಂದಜಿ ಅವರು ಕೂಡ ಈ ಸಂದರ್ಭದಲ್ಲಿ ಮಾತನಾಡಿದರು. ಸಾಂಸ್ಕೃತಿಕ ಕಾರ್ಯಕ್ರಮದಲ್ಲಿ '**ನಿವೇದನ**'ವೆಂಬ ಗೀತ-ಪ್ರವಚನ ಕಾರ್ಯಕ್ರಮ ನಡೆಯಿತು. ಭಾರತೀಯ ಸಂಸ್ಕೃತಿಯ ಹಿರಿಮೆ ಹಾಗೂ ಪ್ರಸ್ತುತ ಜೀವನದ ಮೇಲೆ ಅದರ ಪ್ರಭಾವವನ್ನು ಕುರಿತು ಈ ಕಾರ್ಯಕ್ರಮ ಬೆಳಕು ಚೆಲ್ಲಿತು.

ಒಟ್ಟಿನಲ್ಲಿ, ಅತ್ಯಂತ ವಿಜೃಂಭಣೆಯಿಂದ ಜರುಗಿದ ಈ ಕಾರ್ಯಕ್ರಮಗಳು ಆಹ್ವಾನಿತರ, ವಿದ್ಯಾರ್ಥಿಗಳ ಹಾಗೂ ಅತಿಥಿಗಳ ಮೇಲೆ ಅಚ್ಚಳಿಯದ ಮುದ್ರೆಯನ್ನೊತ್ತಿ , ಅಮೃತ ಮಹೋತ್ಸವವು ಸಾರ್ಥಕ್ಯವನ್ನು ಕಾಣುವಂತಾಯಿತು.





Managing Editor : Swami Atmajnanananda Editor : Swami Jnanayogananda
Printed and Published by Swami Atmajnanananda, on behalf of Sri Ramakrishna Ashrama, Yadavagiri, Mysore and Printed at Mayur Graphics, No.C-12, Industrial Estate, Rajaji Nagar, Bangalore -560 010 and published at Sri Ramakrishna Ashrama, Yadavagiri, Mysore -570 020

# ಆರ್ಕಿಡ್ ಟ್ರಾವೆಲ್ & ಟೂರ್ಸ್

Orchid Travel & Tours

**www.orchidtours.net**

## ರಿಯಾಯಿತಿ ದರದಲ್ಲಿ ವಿದೇಶಿಪ್ರವಾಸ



### 7 ದಿನಗಳ ಜಪಾನ್ ಪ್ರವಾಸ

ಹೈ ಸ್ಪೀಡ್ ಬುಲೆಟ್ ರೈಲಿನಲ್ಲಿ ಪ್ರಯಾಣದ ಅನುಭವ ಹಾಗೂ ಜಪಾನ್ ರಾಜಧಾನಿ ಟೋಕಿಯೋ ಪ್ರವಾಸ ಸ್ಥಳ : ಒಸಾಕಾ, ಹಿರೋಷಿಮಾ, ಕ್ಯೋಟೋ, ಮೌಂಟ್‌ಫುಜಿ ನಾರ ನಗರ ವೀಕ್ಷಣೆ ಹಾಗೂ ಇತರೆ



### 6 ದಿನಗಳ ಶ್ರೀಲಂಕಾ ಪ್ರವಾಸ ರಾಮಾಯಣ ಕಾಲದ ಸ್ಥಳ ವೀಕ್ಷಣೆ

ಕೊಲೊಂಬೊ, ನೆಗೆಂಬೊ, ಕ್ಯಾಂಡಿ, ಡಾಂಬುಲಾ, ಸೀತಾ ಅಶೋಕವನ, ಹನುಮಾನ್ ದೇವಸ್ಥಾನ ಹಾಗೂ ಶ್ರೀಲಂಕಾ ಸಾಂಸ್ಕೃತಿಕ ಕಾರ್ಯಕ್ರಮಗಳು



### 15 ಮತ್ತು 18 ದಿನಗಳ ಗ್ರ್ಯಾಂಡ್ ಯು.ಕೆ.–ಯುರೋಪ್ ಪ್ರವಾಸ

ಯು.ಕೆ. ಫ್ರಾನ್ಸ್, ಬೆಲ್ಜಿಯಂ, ನೆದರ್‌ಲ್ಯಾಂಡ್, ಜರ್ಮನಿ, ಸ್ವಿಟ್ಜರ್‌ಲ್ಯಾಂಡ್, ಆಸ್ಟ್ರೀಯಾ, ಲಿಚೆನ್‌ಟೆನ್‌ಸ್ಟೈನ್, ಇಟಲಿ, ವ್ಯಾಟಿಕನ್



### 18 ಮತ್ತು 12 ದಿನಗಳ ಅಮೇರಿಕಾ ಪ್ರವಾಸ

ಪ್ರವಾಸ ಸ್ಥಳ : ನ್ಯೂಯಾರ್ಕ್, ವಾಷಿಂಗ್ಟನ್, ನಯಾಗರ ಫಾಲ್ಸ್, ಲಾಸ್‌ವೇಗಾಸ್, ಲಾಸ್ ಎಂಜಲೀಸ್, ಸ್ಯಾನ್‌ಫ್ರಾನ್ಸಿಸ್ಕೋ



### 11 ದಿನಗಳ ಸಿಂಗಾಪುರ–ಮಲೇಶಿಯ–ಥೈಲ್ಯಾಂಡ್ ಪ್ರವಾಸ

**ಸಿಂಗಾಪುರ** : ಸಿಟಿ ಟೂರ್, ಸೆಂಟೋಸ ಐಲ್ಯಾಂಡ್ ಜೊತೆಗೆ ಸಿ ಅಕ್ವೇರಿಯಂ, ವಿಂಗ್ಸ್ ಆಫ್ ಟೈಮ್, ಜುರೋಂಗ್ ಬರ್ಡ್‌ಪಾರ್ಕ್, ಯುನಿವರ್ಸಲ್ ಸ್ಟುಡಿಯೋ,

**ಮಲೇಶಿಯ** : ಕೌಲಾಲಂಪುರ್ ಸಿಟಿ ಟೂರ್, ಬಾಟು ಗುಹೆ, ಪುತ್ರಜಯ, ಜಂಟಿಂಗ್ ಹೈಲ್ಯಾಂಡ್, ಕೆ.ಎಲ್. ಟವರ್

**ಥೈಲ್ಯಾಂಡ್** : ಪಟ್ಟಾಯ, ಕೋರಲ್ ಐಲ್ಯಾಂಡ್, ಸಫಾರಿ ವರ್ಲ್ಡ್ ಹಾಗೂ ಬ್ಯಾಂಕಾಕ್ ಸಿಟಿ ಟೂರ್, ಮರೀನಾ ಪಾರ್ಕ್, ವಾಕರ್ ಸ್ಟ್ರೀಟ್



### 8 ದಿನಗಳ ಶ್ರೀ ಮುಕ್ತಿನಾಥ ಯಾತ್ರೆ (ಸಾಲಿಗ್ರಾಮಂ) ಬೆಂಗಳೂರಿನಿಂದ ವಿಮಾನದಲ್ಲಿ

ಪ್ರವಾಸ ಸ್ಥಳಗಳು : ಶ್ರೀ ಮುಕ್ತಿನಾಥ ದೇವಸ್ಥಾನ, ಪಶುಪತಿನಾಥ ದೇವಸ್ಥಾನ, ಜಲನಾರಾಯಣ ದೇವಸ್ಥಾನ, ಶ್ರೀ ಕೃಷ್ಣ ದೇವಸ್ಥಾನ, ಕಠ್ಮಂಡು ಸಿಟಿ ಟೂರ್, ಪೋಕ್ರಾ–ಬಿಂದಾಬಾಸಿನಿ ದೇವಸ್ಥಾನ, ತಾಲಭೈರವಿ ದೇವಸ್ಥಾನ, ದೋಣಿಯಲ್ಲಿ ಪೋಕ್ರಾ ಲೇಕ್ ಒಂದು ವಿಹಾರ, ಮನೋಕಾಮನ ದೇವಸ್ಥಾನ (ಕೇಬಲ್ ಕಾರ್‌ನಲ್ಲಿ)




BASAVANAGUDI
#98, 1st Floor, DVG Road
Office 080-26621983, 26617178
**Mobile +91 9900080793 / 9880079588**

***For more details please Contact :***




MALLESHWARAM
# 198, 1st Floor, 11th Cross
Office 080 - 23445598, 23445559
**Mobile +91 9900080791 / 9880079644**

